

ಡಿವಿಜಿ ವೇದಿಕೆಯು ಸಮಾಜ ಸೇವಕ ಟಿ.ಪಿ. ಕೃಷ್ಣ ಹಾಗೂ ಎಪಿಎಂಸಿ ಕಾರ್ಯದರ್ಶಿ ಶರಶ್ಚಂದ್ರ ರಾನಡೆ ಅವರಿಗೆ 'ಡಿವಿಜಿ' ಪ್ರಶಸ್ತಿ ನೀಡಿ ಗೌರವಿಸಿದೆ. ವೇದಿಕೆ ಅಧ್ಯಕ್ಷೆ ಎ. ಲಲಿತಾ ರಂಗಸ್ವಾಮಿ ಹಾಗೂ ಲೇಖಕಿ ವೈ.ಕೆ. ಸಂಧ್ಯಾ ಶರ್ಮ ಹಾಜರಿದ್ದರು.

ವಿಜಯ ಕರ್ನಾಟಕ
ಮಂಗಳವಾರ 1 ನವೆಂಬರ್ 2005

# 'ಜಲಧಾರೆ' ರ್‍ಯಾಲಿ ಇಂದು ಮುಕ್ತಾಯ

ಬೆಂಗಳೂರು, ಅ. 31 - ಮಳೆ ನೀರು ಸಂಗ್ರಹ ಮತ್ತು ಅಂತರ್ಜಲ ಪುನಶ್ಚೇತನದ ಜನಜಾಗೃತಿ ಮೂಡಿಸಲು ಕಳೆದ ತಿಂಗಳು ಆರಂಭವಾಗಿದ್ದ ಮೋಟಾರ್ ಸೈಕಲ್ ರ್‍ಯಾಲಿ ನಗರದಲ್ಲಿ ನ. 1ರಂದು ಮುಕ್ತಾಯಗೊಳ್ಳಲಿದೆ.

ಶೇಷಾದ್ರಿಪುರಂ ಕಾಲೇಜು ಆವರಣದಲ್ಲಿ ಸಂಜೆ 5.30ಕ್ಕೆ ರ್‍ಯಾಲಿಯಲ್ಲಿ ಭಾಗವಹಿಸಿದವರನ್ನು ಗೌರವಿಸಲಾಗುವುದು ಎಂದು ರಾಷ್ಟ್ರಬಂಧು ಸಂಸ್ಥೆ ಸಲಹೆಗಾರ ಡೇನಿಯಲ್ ಜೆ. ಕ್ರಿಸ್ಟೋಫರ್ ಪತ್ರಿಕಾಗೋಷ್ಠಿಯಲ್ಲಿ ಸೋಮವಾರ ತಿಳಿಸಿದರು.

ವಿಧಾನ ಪರಿಷತ್ ಮುಖ್ಯ ಸಚೇತಕ ಸಲೀಂ ಅಹ್ಮದ್, ಟಾಟಾ ಪೈಪ್ಸ್ ದಕ್ಷಿಣ ವಲಯದ ಮ್ಯಾನೇಜರ್ ಡಿ.ಪಿ.ಎಸ್. ಕಪೂರ್, ಸಂಸದ ಆರ್.ವಿ. ವೆಂಕಟೇಶ್, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳ ಕಾರ್ಯದರ್ಶಿ ಉದಯ್ ಓ.ಕೃಷ್ಣ, ವಿಜಯ ಕರ್ನಾಟಕ ಪತ್ರಿಕೆ ಸಂಪಾದಕ ವಿಶ್ವೇಶ್ವರ ಭಟ್ ಮುಂತಾದ ಗಣ್ಯರು ಭಾಗವಹಿಸಲಿದ್ದಾರೆ ಎಂದರು.

# ಸತ್ವಹೀನ ಕವಿತೆಗಳು: ಕಸ್ತೂರಿ ಆತಂಕ




ಲೇಖಕ ಜಿ.ಶರಚ್ಚಂದ್ರ ರಾನಡೆ, ಸಮಾಜ ಸೇವಕ ಡಬ್ಲ್ಯೂ.ಪಿ. ಕೃಷ್ಣರವರನ್ನು ಸನ್ಮಾನಿಸಲಾಯಿತು. ನೀಲತ್ತಹಳ್ಳಿ ಕಸ್ತೂರಿ, ಹಿರೇಮಗಳೂರು ಕಣ್ಣನ್ ಉಪಸ್ಥಿತರಿದ್ದರು.

ಸತ್ವಹೀನ ಕವಿತೆಗಳನ್ನು ಬರೆಯುವ ಕವಿಗಳ ಸಂಖ್ಯೆ ಹೆಚ್ಚುತ್ತಿರುವ ಬಗ್ಗೆ ಸಾಹಿತಿ, ಕಾದಂಬರಿಕಾರ ನೀಲತ್ತಹಳ್ಳಿ ಕಸ್ತೂರಿ ಆತಂಕ ವ್ಯಕ್ತಪಡಿಸಿದ್ದಾರೆ.

ಭಾನುವಾರ ಕನ್ನಡ ಸಾಹಿತ್ಯ ಪರಿಷತ್ ಸಭಾಂಗಣದಲ್ಲಿ ಡಿವಿಜಿ ವೇದಿಕೆ ಆಯೋಜಿಸಿದ್ದ ಪ್ರಶಸ್ತಿ ವಿತರಣಾ ಸಮಾರಂಭದಲ್ಲಿ ಮಾತನಾಡಿದರು.

ಇಗೋ ನೋಡು ಚಂದ್ರಬಿಂಬ ತಗೋ ನೀನು ತಾಮ್ರ ಚೆಂಬು....ಎನ್ನುವ ಧಾಟಿಯ ಕವನಗಳ ಸಂಖ್ಯೆ ಹೆಚ್ಚುತ್ತಿವೆ. ಆದರೆ ಗುಣಮಟ್ಟದ ಕವನಗಳ ಸಂಖ್ಯೆಯಲ್ಲಿ ಕೊರತೆ ಎದ್ದು ಕಾಣುತ್ತಿದೆ. ವಿವಿಧ ಅಕಾಡೆಮಿಗಳು ಆಯೋಜಿಸುವ ಕವಿಗೋಷ್ಠಿಗಳಲ್ಲೂ ಇಂತಹ ಕವಿಗಳೇ ಮೇಲುಗೈ ಸಾಧಿಸುತ್ತಿರುವುದು ಒಳ್ಳೆಯ ಬೆಳವಣಿಗೆ ಅಲ್ಲ ಎಂದರು.

ಪವಾಡ ಪುರುಷ ಡಿವಿಜಿ: ಡಿ.ವಿ.ಜಿಯವರನ್ನು ಸಾಹಿತಿ, ಸಮಾಜ ಸೇವಕ, ಒಬ್ಬ ವ್ಯಕ್ತಿ ಹೀಗೆ ಒಂದೇ ದೃಷ್ಟಿಕೋನದಿಂದ ಶ್ರೇಷ್ಠ ಅನ್ನುವುದು ಕಷ್ಟ. ಪತ್ರಕರ್ತರೂ ಆಗಿದ್ದ ಅವರು ಹಲವು ಪ್ರತಿಭೆಗಳ ಸಂಗಮ.

ಬಡತನದಲ್ಲೇ ಹುಟ್ಟಿ, ಬೆಳೆದು ಅದೇ ತನ್ನ ಜೀವನ ಶೈಲಿ ಎಂದು ಬದುಕಿದರು. ನಿರಂತರ ಸಾಹಿತ್ಯ ರಚಿಸಿದರು. ಆಧುನಿಕ ಕನ್ನಡ ಸಾಹಿತ್ಯ ಕಗ್ಗವಿಲ್ಲದೆ ಅಪೂರ್ಣ ಎಂದರು.

ಕನ್ನಡ ಪೂಜಾರಿ ಹಿರೇಮಗಳೂರು ಕಣ್ಣನ್, ಉಗ್ರಾಣ ನಿಗಮದ ವ್ಯವಸ್ಥಾಪಕ ನಿರ್ದೇಶಕ ಡಾ.ಸಿ. ಸೋಮಶೇಖರ್, ಡಿವಿಜಿ ವೇದಿಕೆಯ ಲಲಿತಾರಂಗಸ್ವಾಮಿ, ಲೇಖಕಿ ವೈ.ಕೆ.ಸಂಧ್ಯಾಶರ್ಮಾ ಉಪಸ್ಥಿತರಿದ್ದರು. ಲೇಖಕ ಜಿ.ಶರಚ್ಚಂದ್ರ ರಾನಡೆ, ಸಮಾಜ ಸೇವಕ ಡಬ್ಲ್ಯೂ.ಪಿ. ಕೃಷ್ಣರವರನ್ನು ಸನ್ಮಾನಿಸಲಾಯಿತು.

ಉದಯವಾಣಿ
ಸೋಮವಾರ 17 ಅಕ್ಟೋಬರ್ 2005



ಡಿವಿಜಿ ವೇದಿಕೆ ವತಿಯಿಂದ ಬೆಂಗಳೂರಿನಲ್ಲಿ ಭಾನುವಾರ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಜಿ. ಹರೀಶ್‌ಚಂದ್ರ ರಾನಡೆ ಮತ್ತು ಡಬ್ಲ್ಯು.ಪಿ.ಕೃಷ್ಣ ಅವರನ್ನು ಸನ್ಮಾನಿಸಲಾಯಿತು. ಉಗ್ರಾಣ ನಿಗಮದ ವ್ಯವಸ್ಥಾಪಕ ನಿರ್ದೇಶಕ ಸಿ. ಸೋಮಶೇಖರ್, ಹಿರೇಮಗಳೂರು ಕಣ್ಣನ್, ನೀಲತಹಳ್ಳಿ ಕಸ್ತೂರಿ ಉಪಸ್ಥಿತರಿದ್ದರು.

ಪ್ರಜಾವಾಣಿ

ಶನಿವಾರ 15ನೇ ಅಕ್ಟೋಬರ್ 2005

# ರಾಮಚಂದ್ರರಾವ್‌ಗೆ ಡಿವಿಜಿ ಪ್ರಶಸ್ತಿ

ಕನ್ನಡದ ಹಿರಿಯ ಕವಿ ಪ್ರೊ.ಎಸ್.ಕೆ. ರಾಮಚಂದ್ರರಾವ್ ಅವರಿಗೆ ಡಿವಿಜಿ ವೇದಿಕೆ ನೀಡುವ ಡಿ.ವಿ.ಜಿ. ಪ್ರಶಸ್ತಿ ಲಭಿಸಿದೆ. ಭಾನುವಾರ ಸಂಜೆ 5.30ಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆಯುವ ಸಮಾರಂಭದಲ್ಲಿ ಪ್ರಶಸ್ತಿ ಪ್ರದಾನ ಮಾಡಲಾಗುತ್ತದೆ ಎಂದು ವೇದಿಕೆಯ ಅಧ್ಯಕ್ಷೆ ಲಲಿತಾ ರಂಗಸ್ವಾಮಿ ಪ್ರಕಟಣೆಯಲ್ಲಿ ತಿಳಿಸಿದ್ದಾರೆ.

ಹಿರಿಯ ಗಾಂಧೀವಾದಿ ನೀಲತ್ತಹಳ್ಳಿ ಕಸ್ತೂರಿ ಅವರು ಡಿವಿಜಿ ಅವರಿಗೆ ನುಡಿ ನಮನ ಸಲ್ಲಿಸಲಿದ್ದು, ರಾಜ್ಯ ಉಗ್ರಾಣ ನಿಗಮದ ವ್ಯವಸ್ಥಾಪಕ ನಿರ್ದೇಶಕ ಡಾ.ಸಿ. ಸೋಮಶೇಖರ್ ಪ್ರಶಸ್ತಿ ಪ್ರದಾನ ಮಾಡಲಿದ್ದಾರೆ. ಡಬ್ಲ್ಯು.ಪಿ. ಕೃಷ್ಣ ಹಾಗೂ ಹರಿಶ್ಚಂದ್ರ ರಾನಡೆ ಅವರಿಗೂ ಈ ಪ್ರಶಸ್ತಿ ಪ್ರದಾನ ಮಾಡಲಾಗುತ್ತದೆ ಎಂದು ಅವರು ತಿಳಿಸಿದ್ದಾರೆ.

ಈ ಸಂಜೆ

ಶನಿವಾರ ೧೫-೧೦-೨೦೦೫

# ಪ್ರೊ|| ಎಸ್ಕೆ ಆರ್, ಪಿ.ಕೃಷ್ಣ, ಹರಿಶ್ಚಂದ್ರ ರಾನಡೆಗೆ ಡಿವಿಜಿ ಪ್ರಶಸ್ತಿ

ಬೆಂಗಳೂರು, ಅ.೧೫-ವಿಜಯನಗರದ ಡಿವಿಜಿ ವೇದಿಕೆ ನೀಡುವ ಡಿವಿಜಿ ಪ್ರಶಸ್ತಿಗೆ ಪ್ರೊ. ಎಸ್.ಕೆ. ರಾಮಚಂದ್ರರಾವ್, ಡಬ್ಲ್ಯು. ಪಿ.ಕೃಷ್ಣ ಹಾಗೂ ಹರಿಶ್ಚಂದ್ರ ರಾನಡೆ ಅವರುಗಳು ಆಯ್ಕೆಯಾಗಿದ್ದಾರೆ.



ಡಬ್ಲ್ಯು. ಪಿ. ಕೃಷ್ಣ



ಹರಿಶ್ಚಂದ್ರ ರಾನಡೆ

ನಾಳೆ ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ ಡಿವಿಜಿ ಅವರ ಸ್ಮರಣಾರ್ಥ ಸಂಜೆ 5.30ಕ್ಕೆ ನಡೆಯಲಿರುವ ಕಾರ್ಯಕ್ರಮದಲ್ಲಿ ಪ್ರಶಸ್ತಿ ಪ್ರದಾನ ಮಾಡಲಾಗುವುದು ಎಂದು ವೇದಿಕೆ ಪತ್ರಿಕಾ ಪ್ರಕಟಣೆಯಲ್ಲಿ ತಿಳಿಸಿದೆ.

ನೀಲತ್ತಹಳ್ಳಿ ಕಸ್ತೂರಿ ಹಾಗೂ ಹಿರೇಮಗಳೂರು ಕಣ್ಣನ್ ಅವರು ನುಡಿನಮನ ಸಲ್ಲಿಸಲಿದ್ದಾರೆ. ಕರ್ನಾಟಕ ರಾಜ್ಯ ಉಗ್ರಾಣ ನಿಗಮದ ವ್ಯವಸ್ಥಾಪಕ ನಿರ್ದೇಶಕ ಡಾ. ಸೋಮಶೇಖರ್ ಅಧ್ಯಕ್ಷತೆ ವಹಿಸಿ ಪ್ರಶಸ್ತಿ ಪ್ರದಾನ ಮಾಡುವರು. ಪ್ರೊ. ಎಸ್.ಕೆ.ರಾಮಚಂದ್ರ ರಾವ್ ಅವರು ಆಡು ಮುಟ್ಟದ ಸೊಪ್ಪಿಲ್ಲ ಎನ್ನುವಂತೆ ಎಲ್ಲ ಕ್ಷೇತ್ರಗಳಲ್ಲೂ ಸೇವೆ ಸಲ್ಲಿಸಿದ್ದು, ಸಾಹಿತ್ಯ, ಸಂಗೀತ, ವಿಜ್ಞಾನ, ತತ್ವಜ್ಞಾನ, ವೈದ್ಯಕೀಯ ಇತ್ಯಾದಿ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಹಲವು ಗ್ರಂಥಗಳನ್ನು ಬರೆದಿದ್ದಾರೆ.

ಡಬ್ಲ್ಯು. ಪಿ. ಕೃಷ್ಣ ಅವರು ತಂತ್ರಜ್ಞ, ಶಿಕ್ಷಣತಜ್ಞ, ಸಮಾಜ ಸೇವಕರಾಗಿದ್ದರೆ, ಹರಿಶ್ಚಂದ್ರ ರಾನಡೆ ಕೃಷಿ ಮಾರಾಟ ಇಲಾಖೆಯಲ್ಲಿ ಹೆಚ್ಚುವರಿ ನಿರ್ದೇಶಕರಾಗಿದ್ದು, ಸಾಂಸ್ಕೃತಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಉದಯವಾಣಿ

ಅಕ್ಟೋಬರ್ 8, 2005

# ಅಂತರ ಕಾಲೇಜು ಉತ್ಸವ

**ಬೆಂಗಳೂರು**

ಶೇಷಾದ್ರಿಪುರಂ ಪದವಿ ಕಾಲೇಜಿನ ಮನಃಶಾಸ್ತ್ರ ಹಾಗೂ ಪತ್ರಿಕೋದ್ಯಮ ವಿಭಾಗಗಳು ಇತ್ತೀಚೆಗೆ ಜಂಟಿಯಾಗಿ ಅಂತರ ಕಾಲೇಜು ಉತ್ಸವ ಏರ್ಪಡಿಸಿದ್ದವು. ಉತ್ಸವ ಉದ್ಘಾಟಿಸಿದ ಪೊಲೀಸ್ ಮಹಾನಿರ್ದೇಶಕ ಡಾ।ಅಜಯ್‌ಕುಮಾರ್ ಸಿಂಗ್, ಯುವಕರ ಮೇಲೆ ಅಪರಾಧ ಸುದ್ದಿ ಯಾವ ರೀತಿ ಪರಿಣಾಮ ಬೀರುತ್ತದೆ ಎಂಬುದನ್ನು ವಿವರಿಸಿದರು. ನಂತರ ಅವರು ಮಾದರಿ ಪತ್ರಿಕಾಗೋಷ್ಠಿಯನ್ನುದ್ದೇಶಿಸಿ ಮಾತನಾಡಿ ವಿದ್ಯಾರ್ಥಿಗಳ ಚುರುಕಾದ ಪ್ರಶ್ನೆಗಳಿಗೆ ಉತ್ತರಿಸಿದರು.

ವರದಿಗಾರಿಗೆ, ವ್ಯಂಗ್ಯಚಿತ್ರ ರಚನೆ, ಶೀರ್ಷಿಕೆ ಬರೆಯುವಿಕೆ, ನಾಟಕ, ಭಿತ್ತಿ ಪತ್ರ ಸಿದ್ಧಪಡಿಸುವಿಕೆ ಮುಂತಾದ 12 ಸ್ಪರ್ಧೆಗಳಲ್ಲಿ ಇನ್ನೂರಕ್ಕೂ ಹೆಚ್ಚಿನ ವಿದ್ಯಾರ್ಥಿಗಳು ಭಾಗವಹಿಸಿದ್ದು ಉತ್ಸವದ ವೈಶಿಷ್ಟ್ಯ.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಕೆ.ಎಂ. ನಂಜಪ್ಪ, ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಹಿಂದುಳಿದ ಆಯೋಗದ ಸದಸ್ಯ ಬಿ.ಕೆ. ರವಿ, ಕಾಲೇಜಿನ ಪತ್ರಿಕೋದ್ಯಮ ವಿಭಾಗದ ನಂದಿನಿ ಲಕ್ಷ್ಮೀಕಾಂತ್, ಮನಃಶಾಸ್ತ್ರ ವಿಭಾಗದ ಪರಿಮಳ ಗುರುಪ್ರಸಾದ್ ಮೊದಲಾದವರು ಉಪಸ್ಥಿತರಿದ್ದರು.



# ‘ಸಮಾಜದಲ್ಲಿ ಪ್ರಲೋಭನೆಯ ಸುನಾಮಿ’

ಬೆಂಗಳೂರು: ಸಮಾಜದ ಎಲ್ಲ ಕ್ಷೇತ್ರಗಳಲ್ಲಿ ಪ್ರಲೋಭನೆ ಹಾಗೂ ಪ್ರತೀಕಾರದ ಸುನಾಮಿ ಅಪ್ಪಳಿಸಿ ಅನಾರೋಗ್ಯಕರ ಸನ್ನಿವೇಶ ಸೃಷ್ಟಿಯಾಗಿದೆ ಎಂದು ಚಿತ್ರದುರ್ಗ ಬೃಹನ್ಮಠದ ಶ್ರೀ ಮುರುಘರಾಜೇಂದ್ರ ಸ್ವಾಮೀಜಿ ಆತಂಕ ವ್ಯಕ್ತಪಡಿಸಿದ್ದಾರೆ.

‘ಪತ್ರಿಕಾ ಚಳವಳಿ’ ಯುವಕರ ‘ಲೋಕಪ್ರಿಯ’ ನಿಯತಕಾಲಿಕವನ್ನು ನಗರದಲ್ಲಿ ಸೋಮವಾರ ಬಿಡುಗಡೆ ಮಾಡಿ ಅವರು ಮಾತನಾಡಿದರು.

ಧಾರ್ಮಿಕ, ಸಾಹಿತ್ಯ, ವ್ಯಾಪಾರ, ರಾಜಕೀಯ ಹಾಗೂ ಪತ್ರಿಕೋದ್ಯಮ ಕ್ಷೇತ್ರಗಳಲ್ಲೂ ಪ್ರಲೋಭನೆ ಕಾಣುತ್ತಿದ್ದೇವೆ. ಪ್ರಲೋಭನೆ ಇಲ್ಲದೆ ಯಾವ ಕೆಲಸವೂ ನಡೆಯುವುದಿಲ್ಲ ಎನ್ನುವ ವಾತಾವರಣ ಎದುರಾಗಿದೆ. ಇದಕ್ಕೆ ಬುದ್ಧಿಜೀವಿಗಳು ಹಾಗೂ ಪತ್ರಕರ್ತರೂ ಸಿಲುಕಿದ್ದಾರೆ ಎಂದು ಅಭಿಪ್ರಾಯಪಟ್ಟರು.



‘ಲೋಕಪ್ರಿಯ’ ನಿಯತಕಾಲಿಕ ಬಿಡುಗಡೆ ಸಮಾರಂಭದಲ್ಲಿ ಹಿಂದುಳಿದ ಆಯೋಗದ ಸದಸ್ಯ ಬಿ. ಕೆ. ರವಿ, ಶ್ರೀ ಮುರುಘರಾಜೇಂದ್ರ ಸ್ವಾಮೀಜಿ, ‘ವಿಜಯ ಕರ್ನಾಟಕ’ ಸಂಪಾದಕ ವಿಶ್ವೇಶ್ವರ ಭಟ್ ಮತ್ತು ‘ಲೋಕಪ್ರಿಯ’ ಸಂಪಾದಕ ಬಸವರಾಜ ದೊಡ್ಡಮನಿ.

ಪ್ರತೀಕಾರ ಮನೋಭಾವದ ಬದಲು ಶಾಂತಿ-ಸೌಹಾರ್ದ ನೆಲೆಯೂರಬೇಕು. ತನ್ಮೂಲಕ ಬದಲಾವಣೆ ಕಾಣಬೇಕು. ಪ್ರತೀಕಾರ ಮನೋಭಾವ ಇದೇ ರೀತಿ ಮುಂದುವರಿದರೆ, ಅನಾಗರಿಕ ಜಗತ್ತು ಅನಾವರಣವಾಗುವ ಭೀತಿ ಕಾಡುತ್ತಿದೆ. ಪ್ರತೀಕಾರದ ಹೊಸ್ತಿಲಲ್ಲಿ ನಾಡು ಕಟ್ಟುವುದು ಅಸಾಧ್ಯ ಎಂದರು.

**ದಮನಕಾರಿ ನೀತಿ:** ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರಶ್ನೆ, ಟೀಕೆಗಳು ಸರ್ವೇಸಾಮಾನ್ಯ. ಪ್ರಶ್ನಿಸದಿರಿ ಎನ್ನುವುದು ದಮನಕಾರಿ ನೀತಿ. ಪ್ರಲೋಭನೆ, ಪ್ರತೀಕಾರಗಳಿಗೆ ಪ್ರತಿಷ್ಠೆ ಕಾರಣ. ಸಮಾನತೆಯ ಸ್ಥಾಪನೆಯೊಂದಿಗೆ ಅಸ್ಪೃಶ್ಯತೆ ನಿವಾರಣೆಗೆ ಚಿಂತನೆ ನಡೆಸಬೇಕು ಎಂದು ಹೇಳಿದರು.

ಜಾತಿ ಮೋಹ ಹಾಗೂ ಜಾಗತೀಕರಣದ ಪ್ರಭಾವ ಅನಾರೋಗ್ಯಕರ ಬೆಳವಣಿಗೆಗಳಿಗೆ ಕಾರಣ. ಪತ್ರಿಕೆಗಳು ಜಾತಿಯನ್ನವಲಂಬಿಸದೆ ಜನತೆಯನ್ನು ಅವಲಂಬಿಸಬೇಕು. ಎಲ್ಲ ಕ್ಷೇತ್ರಗಳ ನಡುವೆ ಆರೋಗ್ಯಕರ ವಾತಾವರಣಕ್ಕೆ ಮುಕ್ತ ಚಿಂತನೆಯ ಸನ್ನಿವೇಶ ಸೃಷ್ಟಿಸಬೇಕು ಎಂದು ಅಭಿಪ್ರಾಯಪಟ್ಟರು.

‘ವಿಜಯ ಕರ್ನಾಟಕ’ ಸಂಪಾದಕ ವಿಶ್ವೇಶ್ವರ ಭಟ್, ‘ಲೋಕಪ್ರಿಯ’ ನಿಯತಕಾಲಿಕ ಸಂಪಾದಕ ಬಸವರಾಜ ದೊಡ್ಡಮನಿ, ಹಿಂದುಳಿದ ಆಯೋಗದ ಸದಸ್ಯ ಬಿ. ಕೆ. ರವಿ, ಶೇಷಾದ್ರಿ ಪುರಂ ಶಿಕ್ಷಣ ದತ್ತಿ ಗೌರವ ಕಾರ್ಯದರ್ಶಿ ಡಬ್ಲ್ಯು. ಪಿ. ಕೃಷ್ಣ, ಜಿಲ್ಲಾ ಪಂಚಾಯಿತಿ ಮಾಜಿ ಸದಸ್ಯೆ ಸರೋಜಮ್ಮ, ಮಾಗಡಿ ಪುರಸಭೆ ಅಧ್ಯಕ್ಷೆ ಕಲ್ಪನಾ ಶಿವಣ್ಣ ಹಾಜರಿದ್ದರು.

# ಯುವಕರು ವಿಶ್ವಭ್ರಾತೃತ್ವ ಅಳವಡಿಸಿಕೊಳ್ಳಬೇಕು

ತುಮಕೂರು,ಸೆ.21 - ರಾಷ್ಟ್ರಪ್ರೇಮ, ಪವಿತ್ರ ವ್ಯಕ್ತಿತ್ವ, ಸಾಮಾಜಿಕ ಕಳಕಳಿ, ಧಾರ್ಮಿಕ ಚಿಂತನೆ ಮತ್ತು ವಿಶ್ವಭ್ರಾತೃತ್ವ ನಿಲುವನ್ನುಯುವಕರು ಅಳವಡಿಸಿಕೊಳ್ಳ ಬೇಕಾಗಿದೆ ಎಂದು ಕುವೆಂಪು ವಿವಿ ಕುಲಪತಿ ಡಾ.ಕೆ. ಚಿದಾನಂದಗೌಡ ಸಲಹೆ ನೀಡಿದರು.

ಇಲ್ಲಿನ ಗುಬ್ಬಿ ವೀರಣ್ಣ ರಂಗ ಮಂದಿರದಲ್ಲಿ ರಾಮಕೃಷ್ಣ-ವಿವೇಕಾನಂದ ಆಶ್ರಮದ ವಿವೇಕಾನಂದ ಯುವಕ ಸಂಘದ ಪ್ರಥಮ ವಾರ್ಷಿಕೋತ್ಸವ ಉದ್ಘಾಟಿಸಿ ಮಾತನಾಡಿ, ಮಾತೃ ಭೂಮಿಯನ್ನು ಬಲಿಷ್ಠಗೊಳಿಸುವಲ್ಲಿ ಯುವಕರು ಕಾರ್ಯ ಪ್ರವೃತ್ತರಾಗ ಬೇಕಿದೆ. ತ್ಯಾಗ ಮತ್ತು ಸೇವೆಯ ಸಾಕಾರ ಮೂರ್ತಿಯಂತಿರುವ ಸ್ವಾಮಿ ವಿವೇಕಾನಂದರ ಜೀವನದ ನಿಲುವು, ಧ್ಯೇಯೋದ್ದೇಶಗಳು ಸರ್ವಕಾಲಿಕ ಮಾನ್ಯತೆ ಪಡೆದಿವೆ ಎಂದರು.

ಮುಖ್ಯ ಅತಿಥಿಗಳಾಗಿದ್ದ ರಾಜ್ಯ ಸಹಕಾರ ಇಲಾಖೆಯ ಕಾರ್ಯದರ್ಶಿ ಕೆ.ಎಚ್. ಗೋಪಾಲಕೃಷ್ಣೇಗೌಡ ಮಾತನಾಡಿ, ಮಾನವೀಯತೆ ವ್ಯಕ್ತಿಯನ್ನು ಕಾಪಾಡುತ್ತದೆ. ರಾಷ್ಟ್ರ ನಿರ್ಮಾಣಕ್ಕೂ ಬೆನ್ನೆಲುಬಾಗುತ್ತದೆ ಎಂದ ಅವರು, ಯುವಕರ ವ್ಯಕ್ತಿತ್ವ ನಿರ್ಮಾಣಕ್ಕಾಗಿ ಶ್ರಮಿಸುತ್ತಿರುವ ಆಶ್ರಮದ ಕಾರ್ಯ ಶ್ಲಾಘನೀಯ ಎಂದರು.



ತುಮಕೂರಿನ ರಾಮಕೃಷ್ಣ-ವಿವೇಕಾನಂದ ಆಶ್ರಮದ ವಿವೇಕಾನಂದ ಯುವಕ ಸಂಘದ ಪ್ರಥಮ ವಾರ್ಷಿಕೋತ್ಸವವನ್ನು ಕುವೆಂಪು ವಿವಿ ಕುಲಪತಿ ಡಾ.ಕೆ. ಚಿದಾನಂದಗೌಡ ಉದ್ಘಾಟಿಸಿದರು. ಸ್ವಾಮಿ ಧೀರಾನಂದ, ಸ್ವಾಮಿ ಪ್ರಕಾಶಾನಂದ, ಸ್ವಾಮಿ ವೀರೇಶಾನಂದ, ನಿಮ್ಹಾನ್ಸ್ ಎಂ.ವಿ. ಸಾವಿತ್ರಿ, ಕೆ.ಎಚ್. ಗೋಪಾಲಕೃಷ್ಣೇಗೌಡ, ಕೃಷ್ಣ, ಸ್ವಾಮಿ ಶಾರದಾತ್ಮಾನಂದ, ಸಿದ್ಧಲಿಂಗೇಗೌಡ ಪಾಲ್ಗೊಂಡಿದ್ದರು.

ನಿಮ್ಹಾನ್ಸ್ ಅಧಿಕಾರಿ ಎಂ.ವಿ. ಸಾವಿತ್ರ ಮಾತನಾಡಿ, ನಾಗರೀಕತೆ ಮತ್ತು ಆಧುನಿಕತೆಯ ಅಭಿವೃದ್ಧಿಯ ಅಮಲಿನಲ್ಲಿರುವ ಸಮಾಜ, ಹಿರಿಯರು ಪಾಲಿಸಿಕೊಂಡು ಬಂದ ಸಂಸ್ಕೃತಿಯನ್ನು ನಿರ್ಲಕ್ಷಿಸುತ್ತಿರುವುದು ಆಘಾತಕಾರಿ ಎಂದರು.

ಬೆಂಗಳೂರಿನ ಶೇಷಾದ್ರಿಪುರಂ ಶಿಕ್ಷಣ ದತ್ತಿ ಪ್ರಧಾನ ಕಾರ್ಯದರ್ಶಿ ಡಬ್ಲ್ಯೂ.ಪಿ.ಕೃಷ್ಣ ಮಾತನಾಡಿ, ರಾಷ್ಟ್ರಪ್ರೇಮವನ್ನು ಮೂಡಿಸದ ಶಿಕ್ಷಣ ವ್ಯವಸ್ಥೆ ರಾಷ್ಟ್ರವನ್ನು ಸಂರಕ್ಷಿಸದು. ರಾಷ್ಟ್ರ ನಂಬಿದ ಆದರ್ಶದೊಂದಿಗೆ ಆತ್ಮವಿಶ್ವಾಸ, ಶ್ರಮ ಸಂಸ್ಕೃತಿಗಳ ಮೂಲಕ ಮಕ್ಕಳನ್ನು ತರಬೇತಿಗೊಳಿಸಬೇಕು. ಆಗ ಮಾತ್ರ ನಮ್ಮ ರಾಷ್ಟ್ರ ಬಲಿಷ್ಠವಾಗಿ ವಿಶ್ವಶಾಂತಿಗೆ ಶ್ರಮಿಸಲು ಸಾಧ್ಯ ಎಂದರು.

ರಾಮಕೃಷ್ಣ- ವಿವೇಕಾನಂದ ಆಶ್ರಮ ರಾಣೆಬೆನ್ನೂರು ಸ್ವಾಮಿ ಪ್ರಕಾಶನಂದರು, ಗದಗಿನ ಸ್ವಾಮಿ ಶಾರದಾತ್ಮಾನಂದರು ಮತ್ತು ಸ್ವಾಮಿ ಧೀರಾನಂದರು ಹಾಗೂ ನಗರಸಭೆ ಸದಸ್ಯ ಸಿದ್ಧಲಿಂಗೇಗೌಡ ಹಾಜರಿದ್ದರು. ಸ್ವಾಮಿ ವೀರೇಶಾನಂದ ಸರಸ್ವತಿ ಸ್ವಾಗತಿಸಿದರು. ಶಿಕ್ಷಣ ತಜ್ಞ ಎನ್.ಕೃಷ್ಣಮೂರ್ತಿ ವಂದಿಸಿದರು.

ಪ್ರಾದೇಶಿಕ | ಪ್ರಜಾವಾಣಿ

ಭಾನುವಾರ 2ನೇ ಅಕ್ಟೋಬರ್ 2005

# ಇಟಗಲ್‌ಪುರದಲ್ಲಿ ಎನ್‌ಎಸ್‌ಎಸ್ ಶಿಬಿರ

ಯಲಹಂಕ : ಆಧುನಿಕ ಜೀವನದ ಜೊತೆಗೆ ಹಳ್ಳಿಗಳ ಪರಿಸರಕ್ಕೂ ಹೊಂದಿಕೊಳ್ಳುವ ಮನೋಭಾವ ಬೆಳೆಸಿಕೊಳ್ಳಬೇಕು ಎಂದು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ವುಡೇ ಪಿ. ಕೃಷ್ಣ ಶನಿವಾರ ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

ಇಲ್ಲಿಗೆ ಸಮೀಪದ ಇಟಗಲ್‌ಪುರದಲ್ಲಿ ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ಎನ್‌ಎಸ್‌ಎಸ್ ಘಟಕ ಹಮ್ಮಿಕೊಂಡಿರುವ 10 ದಿನಗಳ ವಿಶೇಷ ಶಿಬಿರ ಉದ್ಘಾಟಿಸಿ ಮಾತನಾಡಿದರು.

ಕಾಲೇಜಿನ ಪ್ರಾಂಶುಪಾಲ ಡಾ. ಎಂ. ಪ್ರಕಾಶ್, ಸಂಸ್ಥೆ ಅಧ್ಯಕ್ಷ ಕೆ.ಎಂ. ನಂಜಪ್ಪ, ಸಹಾಯಕ ಕಾರ್ಯದರ್ಶಿ ಆರ್. ಕೃಷ್ಣ, ಪ್ರಾಚಾರ್ಯ ಡಾ. ಎಲ್.ಉಮಾದೇವಿ, ಮುಖಂಡರಾದ ಸಿ. ರಾಜಣ್ಣ, ಮುನಿರೆಡ್ಡಿ, ಸಂಪಂಗಿ ರೆಡ್ಡಿ, ಶಿಬಿರಾಧಿಕಾರಿ ಎಚ್.ಬಿ. ಶಿವಕುಮಾರ್, ಜನಾರ್ಧನ್, ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು

2-10-2005

ಪುಟ 12



ಯಲಹಂಕ ಸಮೀಪವಿರುವ ಇಟಗಲ್‌ಪುರ ಗ್ರಾಮದಲ್ಲಿ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ವತಿಯಿಂದ ಏರ್ಪಡಿಸಲಾಗಿದ್ದ ರಾಷ್ಟ್ರೀಯ ಸೇವಾ ಯೋಜನೆಯು ಹತ್ತು ದಿನಗಳ ವಿಶೇಷ ಶಿಬಿರವನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಕೆ.ಎಂ. ನಂಜಪ್ಪ ಉದ್ಘಾಟಿಸಿದರು. ಎಸ್.ಇ.ಟಿ. ಕಾರ್ಯದರ್ಶಿ ಆರ್.ಕೃಷ್ಣ ಮೊದಲಾದವರು ಉಪಸ್ಥಿತರಿದ್ದರು.

# ಗ್ರಾಮ ನೈರ್ಮಲ್ಯ ರಕ್ಷಣೆ ಎಲ್ಲರ ಹೊಣೆ

ಯಲಹಂಕ, ಅ. 1- ಗ್ರಾಮ ನೈರ್ಮಲ್ಯ ಕಾಪಾಡುವುದು ಪ್ರತಿಯೊಬ್ಬರ ಜವಾಬ್ದಾರಿ ಎಂದು ರಾಜ್ಯೋತ್ಸವ ಪ್ರಶಸ್ತಿ ವಿಜೇತ ಡಬ್ಲ್ಯು.ಪಿ. ಕೃಷ್ಣ ಅಭಿಪ್ರಾಯ ವ್ಯಕ್ತಪಡಿಸಿದರು.

ಸಮೀಪದ ಇಟಗಲ್‌ಪುರ ಗ್ರಾಮದಲ್ಲಿ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆಯ ಹತ್ತು ದಿನಗಳ ವಿಶೇಷ ಶಿಬಿರದಲ್ಲಿ ಅವರು ಮಾತನಾಡಿದರು.

ಶೇಷಾದ್ರಿಪುರಂ ಕಾಲೇಜಿನ ಪ್ರಾಂಶುಪಾಲ ಡಾ. ಎಂ. ಪ್ರಕಾಶ್ ಮಾತನಾಡಿ, ಸೇವಾ ಶಿಬಿರದಲ್ಲಿ ಶ್ರಮದಾನ ಸಾಂಕೇತಿಕ. ಈ ರೀತಿಯ ಶ್ರಮದಾನ ಶಿಬಿರಗಳು ಗ್ರಾಮೀಣ ಪ್ರದೇಶದ ವಾತಾವರಣವನ್ನು ನಗರ ವಿದ್ಯಾರ್ಥಿಗಳು ತಿಳಿಯಲು ಅವಕಾಶ ಕಲ್ಪಿಸುತ್ತವೆ ಎಂದರು.

ಶಿಬಿರವು ಬೆಂಗಳೂರು ವಿಶ್ವವಿದ್ಯಾಲಯ ಮತ್ತು ಶೇಷಾದ್ರಿಪುರಂ ಕಾಲೇಜು ಹಾಗೂ ರಾಜಾನುಕುಂಟೆ ಗ್ರಾಮ ಪಂಚಾಯ್ತಿ ಸಹಯೋಗದೊಂದಿಗೆ 'ಜಲಸಂವರ್ಧನೆಗಾಗಿ ಯುವ ಜನತೆ' ಎಂಬ ಘೋಷಣೆಯಲ್ಲಿ ಹತ್ತು ದಿನಗಳ ಕಾಲ ನಡೆಯಲಿದ್ದು ಇದರಲ್ಲಿ ಶ್ರಮದಾನ ಅರಿವು ಮೂಡಿಸುವ ಉಪನ್ಯಾಸ, ರೈತರು, ಮಹಿಳೆಯರಿಗೆ ತರಬೇತಿ ನೀಡಲಾಗುವುದು. ಇದರ ಉಪಯೋಗ ಪಡೆದುಕೊಳ್ಳಬೇಕು ಎಂದು ಶಿಬಿರಾಧಿಕಾರಿ ಎಚ್.ಬಿ. ಶಿವಕುಮಾರ್ ಮನವಿ ಮಾಡಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಕೆ.ಎಂ. ನಂಜಪ್ಪ ಕಾರ್ಯಕ್ರಮ ಉದ್ಘಾಟನೆ ಮಾಡಿದರು. ಎಸ್.ಇ.ಟಿ. ಕಾರ್ಯದರ್ಶಿ ಆರ್. ಕೃಷ್ಣ, ಡಾ. ಎಲ್. ಉಮಾದೇವಿ, ಕೃಷಿ ಸಮಾಜದ ಸಿ. ರಾಜಣ್ಣ, ಗ್ರಾಮದ ಮುನಿರೆಡ್ಡಿ, ಸಂಪಂಗಿರೆಡ್ಡಿ ಹಾಗೂ ವಿದ್ಯಾರ್ಥಿಗಳು, ಗ್ರಾಮಸ್ಥರು ಭಾಗವಹಿಸಿದ್ದರು.

ಸಂಜೆವಾಣಿ

ಶುಕ್ರವಾರ 30 ಸೆಪ್ಟೆಂಬರ್ 2005

# ಜಿಲ್ಲಾ, ತಾಲ್ಲೂಕು ಮಟ್ಟದಲ್ಲಿ ರಕ್ತ ಸಂಗ್ರಹಣಾ ಕೇಂದ್ರಗಳು

(ನಮ್ಮ ಪ್ರತಿನಿಧಿಯಿಂದ)

ಬೆಂಗಳೂರು, ಸೆ. ೩೦- ರಾಜ್ಯದಲ್ಲಿ ಎಲ್ಲೆಲ್ಲಿ ರಕ್ತ ಸಂಗ್ರಹಣಾ ಕೇಂದ್ರಗಳು ಅಗತ್ಯವಾಗಿದೆಯೋ ಆ ಸಂಬಂಧ ವಿವರವಾದ ವರದಿಯನ್ನು ನೀಡುವಂತೆ ಆರೋಗ್ಯ ಸಚಿವ ಚೆಲುವರಾಯಸ್ವಾಮಿ ಅವರು ಬ್ಲಡ್ ಬ್ಯಾಂಕ್ ಮುಖ್ಯಸ್ಥರಿಗೆ ಇಂದಿಲ್ಲಿ ಸೂಚಿಸಿದರು.

ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಕೇಂದ್ರಗಳಲ್ಲಿ ಅಗತ್ಯವಾಗಿ ರಕ್ತ ಸಂಗ್ರಹಣಾ ಕೇಂದ್ರಗಳು ಬೇಕಾಗಿವೆ. ಈ ಸಂಬಂಧ ಬ್ಲಡ್ ಬ್ಯಾಂಕ್ ಮುಖ್ಯಸ್ಥರು ವರದಿಯೊಂದನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಸಲ್ಲಿಸಬೇಕೆಂದು ಅವರು ತಿಳಿಸಿದರು.

ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಮತ್ತು ಯುವಜನ ಸೇವೆ ಹಾಗೂ ಕ್ರೀಡಾ ಇಲಾಖೆ ಆಶ್ರಯದಲ್ಲಿ ರಕ್ತದಾನ ಶಿಬಿರದಲ್ಲಿ ಯುವಕರ ಪಾತ್ರ ಕುರಿತು ವಿಚಾರ ಸಂಕಿರಣವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ಬೆಂಗಳೂರು ನಗರದಲ್ಲಿ ರಕ್ತದ ಬೇಡಿಕೆಯನ್ನು ಪೂರೈಸಲಾಗುತ್ತದೆ. ಆದರೆ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಅಗತ್ಯವಾಗಿ ಬೇಕಾದಷ್ಟು ರಕ್ತ ಪೂರೈಸಲಾಗುತ್ತಿಲ್ಲ. ಇದರಿಂದ ರೋಗಿಯೂ ಸಾವನ್ನಪ್ಪಿದ ಉದಾಹರಣೆಗಳಿವೆ ಎಂದು ವಿಷಾದ ವ್ಯಕ್ತಪಡಿಸಿದರು.



ಯವನಿಕಾ ಸಭಾಂಗಣದಲ್ಲಿ ಭಾರತೀಯ ರೆಡ್‌ಕ್ರಾಸ್ ಸೊಸೈಟಿ ಹಮ್ಮಿಕೊಂಡಿದ್ದ ರಾಷ್ಟ್ರೀಯ ಸ್ವಯಂ ಪ್ರೇರಿತ ರಕ್ತದಾನ ದಿನಾಚರಣೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವ ಎನ್. ಚೆಲುವರಾಯಸ್ವಾಮಿ ಅವರು ಮಾಧವನಗರ ಲಯನ್ಸ್ ಕ್ಲಬ್ ಅಧ್ಯಕ್ಷ ಪುಟ್ಟಮಾದಯ್ಯ ಅವರಿಗೆ "ಮುಖ್ಯಮಂತ್ರಿ"ಗಳ ಪ್ರಶಸ್ತಿ ಪ್ರದಾನ ಮಾಡಿದರು.

ವೈಜ್ಞಾನಿಕ ಯುಗದಲ್ಲಿ ಅನೇಕ ಭೀಕರ ರೋಗಗಳನ್ನು ಗುಣಪಡಿಸುವಷ್ಟು ಔಷಧಗಳನ್ನು ಕಂಡುಹಿಡಿದಿದ್ದೇವೆ. ಆದರೆ ಮನುಷ್ಯನ ದೇಹಕ್ಕೆ ಅಗತ್ಯವಾಗಿ ಬೇಕಾದ ರಕ್ತಕ್ಕೆ ಬದಲಿ ಪರ್ಯಾಯ ವಿಧಾನವನ್ನು ಕಂಡುಹಿಡಿಯುವಲ್ಲಿ ವಿಫಲವಾಗಿದ್ದೇವೆ ಎಂದು ಸಚಿವರು ತಿಳಿಸಿದರು.

ರಕ್ತ ಕೊಟ್ಟರೆ ಆರೋಗ್ಯ ಕೆಡುತ್ತೆ ಎಂಬುದು ಸುಳ್ಳು ಎಂದ ಸಚಿವರು ಶಾಲಾ-ಕಾಲೇಜುಗಳು, ಸಂಘ ಸಂಸ್ಥೆಗಳು ಇನ್ನೂ ಹೆಚ್ಚಿನ ಮಟ್ಟದಲ್ಲಿ ರಕ್ತ ಸಂಗ್ರಹಿಸುವ ಕಾರ್ಯದಲ್ಲಿ ನಿರತರಾಗಬೇಕೆಂದು ಮನವಿ ಮಾಡಿದರು.

ಪ್ರಾಸ್ತಾವಿಕ ಭಾಷಣ ಮಾಡಿದ [illegible] ಬ್ಯಾಂಕ್ ಅಧ್ಯಕ್ಷ ರಾಜುಚಂದ್ರಶೇಖರ ಅವರು ಇಂದು ರಾಜ್ಯದಲ್ಲಿ 5 ರಿಂದ 6 ಲಕ್ಷ ಯೂನಿಟ್ ರಕ್ತ ಬೇಕಾಗಿದ್ದು, ಆದರೆ 3.5 ಲಕ್ಷ ಯೂನಿಟ್ ರಕ್ತವನ್ನು ಸಂಗ್ರಹಿಸಲು ಸಾಧ್ಯವಾಗಿದೆ ಎಂದು ತಿಳಿಸಿದರು.

ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ಉಪಾಧ್ಯಕ್ಷ ಡಾ. ಎಸ್. ಚಂದ್ರಶೇಖರ ಶೆಟ್ಟಿ ಅಧ್ಯಕ್ಷತೆ ವಹಿಸಿದ್ದರು. ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆ ಆಯುಕ್ತ ಕೆ.ಸಿ. ರಾಮಮೂರ್ತಿ, ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ ಮತ್ತಿತರರು ಉಪಸ್ಥಿತರಿದ್ದರು.

ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆಯ ಅಧ್ಯಕ್ಷರು ಆದ ಸಚಿವ ನಾರಾಯಣಸ್ವಾಮಿ ಅವರು ಈ ಸಂದರ್ಭದಲ್ಲಿ ರಾಜ್ಯಪಾಲರ ಟ್ರೋಫಿ ಪ್ರಶಸ್ತಿಯನ್ನು ಲಯನ್ಸ್ ಕ್ಲಬ್ ಆಫ್ ಬೆಂಗಳೂರು, ಜಯನಗರ ಮತ್ತು ಮುಖ್ಯಮಂತ್ರಿಗಳ ಟ್ರೋಫಿ ಪ್ರಶಸ್ತಿಯನ್ನು ಲಯನ್ಸ್ ಕ್ಲಬ್ ಆಫ್ ಬೆಂಗಳೂರು, ಮಾಧವನಗರ ಹಾಗೂ ಮತ್ತಿತರ ಶಾಲಾ- ಕಾಲೇಜುಗಳು, ಸಂಘ ಸಂಸ್ಥೆಗಳಿಗೆ ಪ್ರಶಸ್ತಿ ನೀಡಿ ಗೌರವಿಸಿದರು.

ಮಾರಂಭ ನಡಯುಲಿದ.

22/09/01

# ಯುವಕರು ವಿಶ್ವಭ್ರಾತೃತ್ವ ಅಳವಡಿಸಿಕೊಳ್ಳಬೇಕು

ತುಮಕೂರು,ಸೆ.21 - ರಾಷ್ಟ್ರಪ್ರೇಮ, ಪವಿತ್ರ ವ್ಯಕ್ತಿತ್ವ, ಸಾಮಾಜಿಕ ಕಳಕಳಿ, ಧಾರ್ಮಿಕ ಚಿಂತನೆ ಮತ್ತು ವಿಶ್ವಭ್ರಾತೃತ್ವ ನಿಲುವನ್ನು ಯುವಕರು ಅಳವಡಿಸಿಕೊಳ್ಳಬೇಕಾಗಿದೆ ಎಂದು ಕುವೆಂಪು ವಿವಿ ಕುಲಪತಿ ಡಾ.ಕೆ. ಚಿದಾನಂದಗೌಡ ಸಲಹೆ ನೀಡಿದರು.

ಇಲ್ಲಿನ ಗುಬ್ಬಿ ವೀರಣ್ಣ ರಂಗ ಮಂದಿರದಲ್ಲಿ ರಾಮಕೃಷ್ಣ-ವಿವೇಕಾನಂದ ಆಶ್ರಮದ ವಿವೇಕಾನಂದ ಯುವಕ ಸಂಘದ ಪ್ರಥಮ ವಾರ್ಷಿಕೋತ್ಸವ ಉದ್ಘಾಟಿಸಿ ಮಾತನಾಡಿ, ಮಾತೃ ಭೂಮಿಯನ್ನು ಬಲಿಷ್ಠಗೊಳಿಸುವಲ್ಲಿ ಯುವಕರು ಕಾರ್ಯ ಪ್ರವೃತ್ತರಾಗಬೇಕಿದೆ. ತ್ಯಾಗ ಮತ್ತು ಸೇವೆಯ ಸಾಕಾರ ಮೂರ್ತಿಯಂತಿರುವ ಸ್ವಾಮಿ ವಿವೇಕಾನಂದರ ಜೀವನದ ನಿಲುವು, ಧ್ಯೇಯೋದ್ದೇಶಗಳು ಸರ್ವಕಾಲಿಕ ಮಾನ್ಯತೆ ಪಡೆದಿವೆ ಎಂದರು.

ಮುಖ್ಯ ಅತಿಥಿಗಳಾಗಿದ್ದ ರಾಜ್ಯ ಸಹಕಾರ ಇಲಾಖೆಯ ಕಾರ್ಯದರ್ಶಿ ಕೆ.ಎಚ್. ಗೋಪಾಲಕೃಷ್ಣೇಗೌಡ ಮಾತನಾಡಿ, ಮಾನವೀಯತೆ ವ್ಯಕ್ತಿಯನ್ನು ಕಾಪಾಡುತ್ತದೆ. ರಾಷ್ಟ್ರ ನಿರ್ಮಾಣಕ್ಕೂ ಬೆನ್ನೆಲುಬಾಗುತ್ತದೆ ಎಂದ ಅವರು, ಯುವಕರ ವ್ಯಕ್ತಿತ್ವ ನಿರ್ಮಾಣಕ್ಕಾಗಿ ಶ್ರಮಿಸುತ್ತಿರುವ ಆಶ್ರಮದ ಕಾರ್ಯ ಶ್ಲಾಘನೀಯ ಎಂದರು.



ತುಮಕೂರಿನ ರಾಮಕೃಷ್ಣ-ವಿವೇಕಾನಂದ ಆಶ್ರಮದ ವಿವೇಕಾನಂದ ಯುವಕ ಸಂಘದ ಪ್ರಥಮ ವಾರ್ಷಿಕೋತ್ಸವವನ್ನು ಕುವೆಂಪು ವಿವಿ ಕುಲಪತಿ ಡಾ.ಕೆ. ಚಿದಾನಂದಗೌಡ ಉದ್ಘಾಟಿಸಿದರು. ಸ್ವಾಮಿ ಧೀರಾನಂದ, ಸ್ವಾಮಿ ಪ್ರಕಾಶಾನಂದ, ಸ್ವಾಮಿ ವೀರೇಶಾನಂದ, ನಿಮ್ಹಾನ್ಸ್ ಎಂ.ವಿ. ಸಾವಿತ್ರಿ, ಕೆ.ಎಚ್. ಗೋಪಾಲಕೃಷ್ಣೇಗೌಡ, ಕೃಷ್ಣ, ಸ್ವಾಮಿ ಶಾರದಾತ್ಮಾನಂದ, ಸಿದ್ಧಲಿಂಗೇಗೌಡ ಪಾಲ್ಗೊಂಡಿದ್ದರು.

ನಿಮ್ಹಾನ್ಸ್ ಅಧಿಕಾರಿ ಎಂ.ವಿ. ಸಾವಿತ್ರ ಮಾತನಾಡಿ, ನಾಗರೀಕತೆ ಮತ್ತು ಆಧುನಿಕತೆಯ ಅಭಿವೃದ್ಧಿಯ ಅಮಲಿನಲ್ಲಿರುವ ಸಮಾಜ, ಹಿರಿಯರು ಪಾಲಿಸಿಕೊಂಡು ಬಂದ ಸಂಸ್ಕೃತಿಯನ್ನು ನಿರ್ಲಕ್ಷಿಸುತ್ತಿರುವುದು ಆಘಾತಕಾರಿ ಎಂದರು.

ಬೆಂಗಳೂರಿನ ಶೇಷಾದ್ರಿಪುರಂ ಶಿಕ್ಷಣ ದತ್ತಿ ಪ್ರಧಾನ ಕಾರ್ಯದರ್ಶಿ ಡಬ್ಲ್ಯೂ.ಪಿ.ಕೃಷ್ಣ ಮಾತನಾಡಿ, ರಾಷ್ಟ್ರ ಪ್ರೇಮವನ್ನು ಮೂಡಿಸದ ಶಿಕ್ಷಣ ವ್ಯವಸ್ಥೆ ರಾಷ್ಟ್ರವನ್ನು ಸಂರಕ್ಷಿಸದು. ರಾಷ್ಟ್ರ ನಂಬಿದ ಆದರ್ಶದೊಂದಿಗೆ ಆತ್ಮವಿಶ್ವಾಸ, ಶ್ರಮ ಸಂಸ್ಕೃತಿಗಳ ಮೂಲಕ ಮಕ್ಕಳನ್ನು ತರಬೇತಿಗೊಳಿಸಬೇಕು. ಆಗ ಮಾತ್ರ ನಮ್ಮ ರಾಷ್ಟ್ರ ಬಲಿಷ್ಠವಾಗಿ ವಿಶ್ವಶಾಂತಿಗೆ ಶ್ರಮಿಸಲು ಸಾಧ್ಯ ಎಂದರು.

ರಾಮಕೃಷ್ಣ- ವಿವೇಕಾನಂದ ಆಶ್ರಮ ರಾಣೆಬೆನ್ನೂರು ಸ್ವಾಮಿ ಪ್ರಕಾಶನಂದರು, ಗದಗಿನ ಸ್ವಾಮಿ ಶಾರದಾತ್ಮಾನಂದರು ಮತ್ತು ಸ್ವಾಮಿ ಧೀರಾನಂದರು ಹಾಗೂ ನಗರಸಭೆ ಸದಸ್ಯ ಸಿದ್ಧಲಿಂಗೇಗೌಡ ಹಾಜರಿದ್ದರು. ಸ್ವಾಮಿ ವೀರೇಶಾನಂದ ಸರಸ್ವತಿ ಸ್ವಾಗತಿಸಿದರು. ಶಿಕ್ಷಣ ತಜ್ಞ ಎನ್.ಕೃಷ್ಣಮೂರ್ತಿ ವಂದಿಸಿದರು.

II
ಬೆಂಗಳೂರು ವಿಜಯ
ಸೋಮವಾರ 19ಸೆಪ್ಟೆಂಬರ್ 2005

# ಮಕ್ಕಳಿಗೆ ಬ್ಯಾಂಕ್ ವ್ಯವಹಾರಗಳ ಬಗ್ಗೆ ಕಲಿಸಿ

ಬೆಂಗಳೂರು: ಮಕ್ಕಳಿಗೆ ಚಿಕ್ಕ ವಯಸ್ಸಿನಿಂದಲೇ ಹಣದ ಉಳಿತಾಯದ ಮಹತ್ವ, ಬ್ಯಾಂಕಿನ ಕಾರ್ಯ ವಿಧಾನ, ಸ್ಪರ್ಧಾ ಮನೋಭಾವ ಹಾಗೂ ಉತ್ತಮ ನಾಯಕತ್ವದ ಗುಣ ಗಳನ್ನು ಬೆಳೆಸಿಕೊಳ್ಳಲು 'ಸಂಚಯಿಕಾ' ಸಹಕಾರಿಯಾಗಬಲ್ಲದು ಎಂದು ರಾಷ್ಟ್ರೀಯ ಉಳಿತಾಯ ಸಂಸ್ಥೆ ಪ್ರಾದೇಶಿಕ ನಿರ್ದೇಶಕ ಮೀರ್ ಅಜ್ಮತ್ ಅಲಿ ಹೇಳಿದರು.

ರಾಷ್ಟ್ರೀಯ ಉಳಿತಾಯ ಸಂಸ್ಥೆ ಮತ್ತು ಸಣ್ಣ ಉಳಿತಾಯ ಹಾಗೂ ರಾಜ್ಯ ಲಾಟರಿ ಜಂಟಿ ಆಶ್ರಯದಲ್ಲಿ ಶೇಷಾದ್ರಿಪುರ ಶಾಲಾ ಮಕ್ಕಳಿಗೆ ಏರ್ಪಡಿಸಿದ್ದ 'ಸಂಚಯಿಕಾ ದಿನಾಚರಣೆ' ಸಮಾರಂಭದಲ್ಲಿ ಮಾತನಾಡಿದರು.

ಈ ಸಂಚಯಿಕಾ ಬ್ಯಾಂಕ್ ನಮ್ಮ ದೇಶದಲ್ಲಿ ಪ್ರಥಮವಾಗಿ 1972ರಲ್ಲಿ ಎಲ್ಲ ಕೇಂದ್ರೀಯ ವಿದ್ಯಾಲಯಗಳಲ್ಲಿ ಹಾಗೂ ಕೆಲವು ಪ್ರಮುಖ ಶಾಲೆಗಳಲ್ಲಿ ಪ್ರಾರಂಭಗೊಂಡಿತ್ತು. ಪ್ರಸ್ತುತ ದೇಶದಲ್ಲಿ 1671 ಸಂಚಯಿಕಾಗಳು ಕಾರ್ಯನಿರ್ವಹಿಸುತ್ತಿದ್ದು, 6 ಲಕ್ಷ ವಿದ್ಯಾರ್ಥಿಗಳನ್ನು ಸದಸ್ಯರನ್ನಾಗಿಸಿ ಕೊಂಡು ಒಟ್ಟು 5 ಕೋಟಿ ರೂ. ಹಣ ಸಂಗ್ರಹಿಸಲಾಗಿದೆ ಎಂದರು.

ಇದೇ ಸಂದರ್ಭದಲ್ಲಿ ಶಾಸಕ ದಿನೇಶ್ ಗುಂಡೂರಾವ್ ಶೈಕ್ಷಣಿಕ ಸ್ಪರ್ಧೆಯ ವಿಜೇತ ಮಕ್ಕಳಿಗೆ ಬಹುಮಾನ ವಿತರಿಸಿ, ಮಕ್ಕಳಿಗೆ ಬ್ಯಾಂಕಿಂಗ್ ಕಾರ್ಯನಿರ್ವಹಣೆ ಬಗ್ಗೆ ಹೆಚ್ಚಿನ ಜ್ಞಾನ ಬೆಳೆಸಿಕೊಳ್ಳಲು ಅವಕಾಶ ಕಲ್ಪಿಸಬೇಕು. ವಿದ್ಯಾರ್ಥಿ ಜೀವನದಲ್ಲಿ ಹಣ ಉಳಿತಾಯ ಮಾಡಿದರೆ ಭವಿಷ್ಯದಲ್ಲಿ ಉಪಯೋಗಕ್ಕೆ ಬರುತ್ತದೆ ಎಂದರು.

ರಾಜ್ಯ ಸಣ್ಣ ಉಳಿತಾಯ ನಿರ್ದೇಶಕ ಆರ್. ಬಸವಣ್ಣ, ಸಂಚಯಿಕಾ ಖಾತೆ ನಿರ್ವಹಣೆ ಬಗ್ಗೆ ಮಾಹಿತಿ ನೀಡಿದರು. ಸಂಸ್ಥೆಯ ಕಾರ್ಯದರ್ಶಿ ಪೂಡಿ ಪಿ. ಕೃಷ್ಣ ಮಾತನಾಡಿ ತಮ್ಮ ಶಾಲೆಯಲ್ಲಿ ಸಂಚಯಿಕಾ ಕಳೆದ 25 ವರ್ಷಗಳಿಂದ ಕಾರ್ಯ ನಿರ್ವಹಿಸುತ್ತಿದ್ದು, 2005ರಲ್ಲಿ ಒಟ್ಟು 11 ಸಾವಿರ ರೂ. ಹಣ ಸಂಗ್ರಹಿಸಲಾಗಿದೆ. ಈ ಖಾತೆಯಲ್ಲಿ ಬರುವ ಬಡ್ಡಿ ಹಣವನ್ನು ಕನ್ನಡ ಮಾಧ್ಯಮದ ಬಡ ಮಕ್ಕಳ ಸಮವಸ್ತ್ರ ಹಾಗೂ ಪಠ್ಯೇತರ ಪುಸ್ತಕಗಳನ್ನು ಉಚಿತವಾಗಿ ಖರೀದಿಸಲು ನೀಡಲಾಗುತ್ತಿದೆ ಎಂದರು. ಮುಖ್ಯೋಪಾಧ್ಯಾಯರಾದ ಎಂ. ಗೀತಾ ಸ್ವಾಗತಿಸಿದರು. ರಾಷ್ಟ್ರೀಯ ಉಳಿತಾಯ ಸಂಸ್ಥೆ ಉಪ ನಿರ್ದೇಶಕ ಬಿ.ಎಸ್. ಮುಕ್ಕಣ್ಣನವರ್ ವಂದಿಸಿದರು.



ಶೇಷಾದ್ರಿಪುರದ ಶ್ರೀ ಸಮಾಜ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಏರ್ಪಡಿಸಿದ್ದ 'ಸಂಚಯಿಕಾ ದಿನಾಚರಣೆ'ಯಲ್ಲಿ ದಿನೇಶ್ ಗುಂಡೂರಾವ್, ಮೀರ್ ಅಜ್ಮತ್ ಅಲಿ, ಆರ್. ಬಸವಣ್ಣ ಭಾಗವಹಿಸಿದ್ದರು.

ರಾಜ್ಯಪ್ರಗತಿ | 10-9-2005 | ಪುಟ 9

# ಜೀವರಕ್ಷಕ ರಕ್ತದಾನ



ನಗರ್ತ ಮಹಿಳಾ ಸಂಘದ ಆಶ್ರಯದಲ್ಲಿ ಇತ್ತೀಚೆಗೆ ನಡೆದ ರಕ್ತದಾನ ಶಿಬಿರದಲ್ಲಿ ಸಂಘದ ಕಾರ್ಯದರ್ಶಿ ಶೈಲಜ ಉದಯಶಂಕರ್ ಮತ್ತು ಕೆ.ಮುರಳಿ ರಕ್ತದಾನ ಮಾಡುತ್ತಿದ್ದಾರೆ. ಸಂಘದ ನಿಕಟಪೂರ್ವ ಅಧ್ಯಕ್ಷರಾದ ಇಂದಿರಾ ಶಿವಣ್ಣ, ಈಗಿನ ಅಧ್ಯಕ್ಷರಾದ ಸುನಂದ ರು.ಬಸಪ್ಪ, ಮುಖ್ಯ ಅತಿಥಿಗಳಾಗಿದ್ದ ಎ.ನಂಜುಂಡಪ್ಪ, ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ನಿರ್ದೇಶಕರುಗಳಾದ ಡಬ್ಲ್ಯು.ಪಿ.ಕೃಷ್ಣ ಮತ್ತು ಮಧುರಾ ಅಶೋಕಕುಮಾರ್ ಮತ್ತಿತರರು ಚಿತ್ರದಲ್ಲಿದ್ದಾರೆ. ಎರಡನೇ ಚಿತ್ರದಲ್ಲಿ ಎ.ಎಸ್.ವಿ.ಎನ್.ವಿ.ಸಂಘದ ವಿಜಯಪುರ ನಿರ್ದೇಶಕ ಬಿ.ಸಿ.ರುದ್ರಪ್ಪ ರಕ್ತದಾನ ಮಾಡುತ್ತಿದ್ದಾರೆ. ಮತ್ತೊಂದು ಚಿತ್ರದಲ್ಲಿ ಎ.ಎಸ್.ವಿ.ಎನ್.ವಿ.ಸಂಘದ ಕಾರ್ಯದರ್ಶಿ ಸಿ.ಸತೀಶ್ ರವರಿಂದ ರಕ್ತದಾನ.

ಮೆಟ್ರೊ | ಪ್ರಜಾವಾಣಿ

ಮಂಗಳವಾರ 6ನೇ ಸೆಪ್ಟೆಂಬರ್ 2005



ಶೇಷಾದ್ರಿಪುರ ಪ್ರೌಢಶಾಲೆ ಆವರಣದಲ್ಲಿ ಸೋಮವಾರ ನಡೆದ ಕಾರ್ಯಕ್ರಮದಲ್ಲಿ ಅತ್ಯಂತ ವೇಗವಾಗಿ ಗಾಳಿಪಟ ನಿರ್ಮಾಣ ಮಾಡಿ ದಾಖಲೆ ನಿರ್ಮಿಸುವುದರಲ್ಲಿ ನಿರತರಾಗಿರುವ ಡಾ. ಎಸ್. ರಮೇಶ್ ಬಾಬು.

### ಒಂದು ತಾಸಿನಲ್ಲಿ 169 ಗಾಳಿಪಟ ತಯಾರಿ!

# ನಮ್ಮೊಳಗೆ ಹೀಗೊಬ್ಬ ಅಪರೂಪದ ದಾಖಲೆ 'ವೀರ'

ಪ್ರಜಾವಾಣಿ ವಾರ್ತೆ

ಬೆಂಗಳೂರು: ಅವರಿಗೆ ದಾಖಲೆಗಳನ್ನು ನಿರ್ಮಿಸುವ ಗೀಳು. ಪ್ರತಿ ಬಾರಿಯೂ ತಮ್ಮದೇ ದಾಖಲೆ ಮುರಿಯುವ ಛಲ. ಸೋಮವಾರ ಒಂದು ತಾಸಿನಲ್ಲಿ 169 ಗಾಳಿಪಟ ತಯಾರಿಸುವ ಮೂಲಕ ಅಚ್ಚರಿ ಮೂಡಿಸಿ, 23ನೇ ವಿಶ್ವ ದಾಖಲೆಯ ಯತ್ನಕ್ಕೆ ಮುನ್ನುಡಿ ಬರೆದರು!

ಈ ಹಿಂದೆ 22 ಸಲ, ಒಂದು ತಾಸಿನಲ್ಲಿ 100 ಗಾಳಿಪಟ ತಯಾರಿಸಿದ್ದು ಇವರೇ ನಿರ್ಮಿಸಿದ ದಾಖಲೆಗಳು. ಅದನ್ನು ಮುರಿದ ಈ ವೀರನ ಹೆಸರು ಡಾ. ಎಸ್. ರಮೇಶ್ ಬಾಬು. ನಗರದ 'ಟಾಪ್ ಆಫ್ ದಿ ವರ್ಲ್ಡ್' ಸಂಸ್ಥೆಯ ಸ್ಥಾಪಕ ನಿರ್ದೇಶಕ.

ಶಾಲಾ ದಿನಗಳಲ್ಲಿ ಗಾಳಿಪಟ ತಯಾರಿಸುವ ಗೀಳು ಅಂಟಿಕೊಂಡಿತು. ಅವರಿಗೀಗ 49ರ ಹರೆಯ, ಈಗಲೂ ದಾಖಲೆ ಮಾಡುವ ಹುಮ್ಮಸ್ಸು. ಕೇರಂ ಹಾಗೂ ಟೇಬಲ್ ಟೆನಿಸ್ ಆಟಗಳಲ್ಲೂ ವೇಗದ ಆಟಕ್ಕಾಗಿ ಗಿನ್ನಿಸ್ ದಾಖಲೆಗೂ ಇವರ ಹೆಸರು ಪರಿಗಣಿಸಲಾಗಿದೆ.

ತಾವು ಕಲಿತ ಶೇಷಾದ್ರಿಪುರ ಪ್ರೌಢಶಾಲೆ ಆವರಣದಲ್ಲಿ ನೂರಾರು ವಿದ್ಯಾರ್ಥಿಗಳು, ಶಿಕ್ಷಕರು ಹಾಗೂ ದಾಖಲೆ ಪ್ರಮಾಣೀಕರಿಸುವ ಮೂವರು ಅಧಿಕಾರಿಗಳ ಎದುರು ಕೇವಲ ಒಂದು ತಾಸಿನಲ್ಲಿ 169 ಗಾಳಿಪಟಗಳನ್ನು ತಯಾರಿಸಿದರು.

ನ್ಯಾಷನಲ್ ಎಜುಕೇಷನ್ ಸೊಸೈಟಿಯ ಅಧ್ಯಕ್ಷ ಡಾ. ಎ.ಎಚ್.ರಾಮರಾವ್, ಶೇಷಾದ್ರಿಪುರ ಶೈಕ್ಷಣಿಕ ಸಂಸ್ಥೆಯ ಅಧ್ಯಕ್ಷ ಕೆ.ಎಂ. ನಂಜಪ್ಪ ಹಾಗೂ ಪ್ರಧಾನ ಕಾರ್ಯದರ್ಶಿ ಡಬ್ಲ್ಯು. ಪಿ.ಕೃಷ್ಣ ಉಪಸ್ಥಿತರಿದ್ದರು.

ಉದಯವಾಣಿ 3-9-2005

# ಭಾರತ ಸೇವಾದಲ ಅಧ್ಯಕ್ಷರಾಗಿ ಗುರುಸಿದ್ಧಸ್ವಾಮಿ



ಬೆಂಗಳೂರು, ಸೆ. 2: ಕೇಂದ್ರದ ಮಾಜಿ ಸಚಿವ ಸಿ.ಕೆ. ಜಾಫರ್ ಷರೀಫ್ ಅವರ ರಾಜೀನಾಮೆಯಿಂದ ತೆರವಾಗಿದ್ದ ಭಾರತ ಸೇವಾದಲದ ನೂತನ ಅಧ್ಯಕ್ಷರಾಗಿ ಬಳ್ಳಾರಿಯ ಎಚ್.ಎಂ. ಗುರುಸಿದ್ದಸ್ವಾಮಿ ಆಯ್ಕೆಯಾಗಿದ್ದಾರೆ.

ಇತ್ತೀಚೆಗೆ ನಡೆದ ಸಂಸ್ಥೆಯ ಕೇಂದ್ರ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಬಳ್ಳಾರಿಯ ನ್ಯಾಯವಾದಿಗಳಾದ ಗುರುಸಿದ್ದಸ್ವಾಮಿ ಅವರನ್ನು ಸರ್ವಾನುಮತದಿಂದ ಒಂದು ವರ್ಷದ ಅವಧಿಗೆ ಆಯ್ಕೆ ಮಾಡಲಾಯಿತು ಎಂದು ಪ್ರಧಾನ ಕಾರ್ಯದರ್ಶಿ ಯು.ಆರ್. ಸಭಾಪತಿ ತಿಳಿಸಿದ್ದಾರೆ.

ಐಎನ್‌ಎ ರಾಮರಾವ್ ಅವರ ನಿಧನದಿಂದ ತೆರವಾಗಿದ್ದ ಸಂಘಟನಾ ಕಾರ್ಯದರ್ಶಿ ಹುದ್ದೆಗೆ ಹಾಸನದ ಎಚ್.ಎಚ್. ದೇವರಾಜ್, ಎಂ. ಬಸವಯ್ಯ ಅವರ ರಾಜೀನಾಮೆಯಿಂದ ತೆರವಾಗಿದ್ದ ಕೋಶಾಧ್ಯಕ್ಷ ಹುದ್ದೆಗೆ ಬೆಂಗಳೂರಿನ ಡಬ್ಲ್ಯೂ.ಪಿ. ಕೃಷ್ಣ ಅವರನ್ನು ಆರಿಸಲಾಗಿದೆ.

ಭಾರತ ಸೇವಾದಲ ಸಂಸ್ಥೆಯ ಅಖಿಲ ಭಾರತ ಸೇವಾದಲ ಸಂಚಾಲಕರನ್ನಾಗಿ ಬೆಂಗಳೂರಿನ ಸಿ.ಎಸ್.ಎನ್. ರಾಜು ಅವರನ್ನು ಸರ್ವಾನುಮತದಿಂದ ಆರಿಸಲಾಗಿದೆ. ಈ ಸಂದರ್ಭದಲ್ಲಿ ಹಾಜರಿದ್ದ ಜಾಫರ್ ಷರೀಫ್ ಅವರು ನೂತನ ಅಧ್ಯಕ್ಷ ಗುರುಸಿದ್ದಸ್ವಾಮಿ ಅವರಿಗೆ ಹಾರ ಹಾಕಿ ಸನ್ಮಾನಿಸಿದರು.

## ಪ್ರಾದೇಶಿಕ ವಾರ್ತೆಗಳು

ಉದಯವಾಣಿ 3-9-2005

### ಭಾರತ ಸೇವಾದಲ ಅಧ್ಯಕ್ಷ ಗುರುಸಿದ್ಧ ಸ್ವಾಮಿ ಇಂದು ಉಡುಪಿಗೆ

ಉಡುಪಿ, ಸೆ. 2: ಭಾರತ ಸೇವಾದಲದ ನೂತನ ಅಧ್ಯಕ್ಷ ಬಳ್ಳಾರಿಯ ನ್ಯಾಯವಾದಿ ಗುರುಸಿದ್ಧ ಸ್ವಾಮಿಯವರು ಉಡುಪಿಯ ಪರ್ಕಳ ಅರಮನೆಯಲ್ಲಿ ನಡೆಯುವ ಭಾರತ ಸೇವಾದಲ ಜಿಲ್ಲಾ ಸಂಘಟಕರುಗಳ ಶಿಬಿರದ ಸಮಾರೋಪ ಸಮಾರಂಭದಲ್ಲಿ ಭಾಗವಹಿಸಲು ಸೆ. 3ರಂದು ಉಡುಪಿಗೆ ಆಗಮಿಸಲಿದ್ದಾರೆಂದು ಪ್ರಧಾನ ಕಾರ್ಯದರ್ಶಿ ಯು. ಆರ್. ಸಭಾಪತಿ ತಿಳಿಸಿರುತ್ತಾರೆ.

ಶನಿವಾರ ಸಂಜೆ ನಡೆಯುವ ವರ್ಣರಂಜಿತ ಸಮಾರೋಪ ಸಮಾರಂಭದಲ್ಲಿ ಭಾಗವಹಿಸಲು ಉಪಾಧ್ಯಕ್ಷ ನಿಂಗಣ್ಣ ಕುಂಠಿ, ಅಖಿಲ ಭಾರತ ಸಂಚಾಲಕರಾದ ಸಿ. ಎನ್. ಎನ್. ರಾಜು, ಸಂಘಟನಾ ಕಾರ್ಯದರ್ಶಿ ಎಚ್. ಎಚ್. ದೇವರಾಜ್, ಖಜಾಂಚಿಗಳಾದ ಡಬ್ಲ್ಯು. ಪಿ. ಕೃಷ್ಣ ಮುಂತಾದ ಗಣ್ಯರು ಭಾಗವಹಿಸಲಿದ್ದಾರೆ.

ಶನಿವಾರ 3 ಸೆಪ್ಟೆಂಬರ್ 2005

UDAYAVANI - BANGALORE ಉದಯವಾಣಿ

# ಭಾರತ ಸೇವಾದಲ ಅಧ್ಯಕ್ಷರಾಗಿ ಗುರುಸಿದ್ದಸ್ವಾಮಿ ಆಯ್ಕೆ



ಎಚ್.ಎಂ. ಗುರುಸಿದ್ದಸ್ವಾಮಿ ಸಿ.ಎಸ್.ಎನ್. ರಾಜು ಡಬ್ಲ್ಯೂ.ಪಿ. ಕೃಷ್ಣ

ಬೆಂಗಳೂರು, ಸೆ. 2: ಕೇಂದ್ರದ ಮಾಜಿ ಸಚಿವ ಸಿ.ಕೆ. ಜಾಫರ್ ಷರೀಫ್ ಅವರ ರಾಜೀನಾಮೆಯಿಂದ ತೆರವಾಗಿದ್ದ ಭಾರತ ಸೇವಾದಲದ ನೂತನ ಅಧ್ಯಕ್ಷರಾಗಿ ಬಳ್ಳಾರಿಯ ಎಚ್.ಎಂ. ಗುರುಸಿದ್ದಸ್ವಾಮಿ ಆಯ್ಕೆಯಾಗಿದ್ದಾರೆ.

ಇತ್ತೀಚೆಗೆ ನಡೆದ ಸಂಸ್ಥೆಯ ಕೇಂದ್ರ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಬಳ್ಳಾರಿಯ ನ್ಯಾಯವಾದಿಗಳಾದ ಗುರುಸಿದ್ದಸ್ವಾಮಿ ಅವರನ್ನು ಸರ್ವಾನುಮತದಿಂದ ಒಂದು ವರ್ಷದ ಅವಧಿಗೆ ಆಯ್ಕೆಮಾಡಲಾಯಿತು ಎಂದು ಪ್ರಧಾನ ಕಾರ್ಯದರ್ಶಿ ಯು.ಆರ್. ಸಭಾಪತಿ ತಿಳಿಸಿದ್ದಾರೆ.

ಐಎಸ್ಎ ರಾಮರಾವ್ ಅವರ ನಿಧನದಿಂದ ತೆರವಾಗಿದ್ದ ಸಂಘಟನಾ ಕಾರ್ಯದರ್ಶಿ ಹುದ್ದೆಗೆ ಹಾಸನದ ಎಚ್.ಎಚ್.ದೇವರಾಜ್, ಎಂ. ಬಸವಯ್ಯ ಅವರ ರಾಜೀನಾಮೆಯಿಂದ ತೆರವಾಗಿದ್ದ ಕೋಶಾಧ್ಯಕ್ಷ ಹುದ್ದೆಗೆ ಬೆಂಗಳೂರಿನ ಡಬ್ಲ್ಯೂ.ಪಿ.ಕೃಷ್ಣ ಅವರನ್ನು ಆರಿಸಲಾಗಿದೆ.

ಭಾರತ ಸೇವಾದಲ ಸಂಸ್ಥೆಯ ಅಖಿಲ ಭಾರತ ಸೇವಾದಲ ಸಂಚಾಲಕರನ್ನಾಗಿ ಬೆಂಗಳೂರಿನ ಸಿ.ಎಸ್.ಎನ್. ರಾಜು ಅವರನ್ನು ಸರ್ವಾನುಮತದಿಂದ ಆರಿಸಲಾಗಿದೆ. ಈ ಸಂದರ್ಭದಲ್ಲಿ ಹಾಜರಿದ್ದ ಜಾಫರ್ ಷರೀಫ್ ಅವರು ನೂತನ ಅಧ್ಯಕ್ಷ ಗುರುಸಿದ್ದಸ್ವಾಮಿ ಅವರಿಗೆ ಹಾರ ಹಾಕಿ ಸನ್ಮಾನಿಸಿದರು. ಕೇಂದ್ರ ರೇಷ್ಮೆ ಮಂಡಳಿ ಅಧ್ಯಕ್ಷ ಎಚ್. ಹನುಮಂತಪ್ಪ ಹಾಗೂ ರಾಜ್ಯಸಭೆಯ ಮಾಜಿ ಸದಸ್ಯರಾದ ಸಂಸ್ಥೆಯ ಉಪಾಧ್ಯಕ್ಷ ಕೆ.ಆರ್.ಜಯದೇವಪ್ಪ ಅವರು ಉಪಸ್ಥಿತರಿದ್ದರು.

ರಾಜ್ಯ | ಪ್ರಜಾವಾಣಿ
ಗುರುವಾರ 1ನೇ ಸೆಪ್ಟೆಂಬರ್ 2005

## ಭಾರತ ಸೇವಾದಳದ ಕೇಂದ್ರ ಸಮಿತಿ

# ಅಧ್ಯಕ್ಷರಾಗಿ ಗುರುಸಿದ್ಧಸ್ವಾಮಿ ಆಯ್ಕೆ

ಪ್ರಜಾವಾಣಿ ವಾರ್ತೆ

[illegible]ರು: ಭಾರತ ಸೇವಾದಳದ ಕೇಂದ್ರ ಸಮಿತಿಯ ನೂತನ ಅಧ್ಯಕ್ಷರಾಗಿ ಬಳ್ಳಾರಿಯ ವಕೀಲ ಎಚ್.ಎಂ. ಗುರುಸಿದ್ಧಸ್ವಾಮಿ ಅವರು ಆಯ್ಕೆಯಾಗಿದ್ದಾರೆ.

ಕೇಂದ್ರದ ಮಾಜಿ ಸಚಿವ ಸಿ.ಕೆ.ಜಾಫರ್ ಷರೀಫ್ ಅವರ ರಾಜೀನಾಮೆಯಿಂದ ಈ ಹುದ್ದೆ ತೆರವಾಗಿದ್ದು, ಖಾಲಿ ಇದ್ದ ಇತರ ಸ್ಥಾನಗಳನ್ನೂ ಇದೇ ಸಂದರ್ಭದಲ್ಲಿ ತುಂಬಲಾಯಿತು.

ಸಂಘಟನಾ ಕಾರ್ಯದರ್ಶಿಯಾಗಿ ಹಾಸನದ ಎಚ್.ಎಚ್.ದೇವರಾಜ್, ಕೋಶಾಧ್ಯಕ್ಷರಾಗಿ ಡಬ್ಲ್ಯೂ.ಟಿ. ಕೃಷ್ಣ, ಅಖಿಲ ಭಾರತ ಸಂಚಾಲಕರಾಗಿ ಸಿ.ಎನ್. ರಾಜು ಆಯ್ಕೆಯಾಗಿದ್ದಾರೆ. ನೂತನ ಅಧ್ಯಕ್ಷರನ್ನು ಜಾಫರ್ ಷರೀಫ್ ಇದೇ ಸಂದರ್ಭದಲ್ಲಿ ಗೌರವಿಸಿದರು. ರೇಷ್ಮೆ ಮಂಡಳಿ ಅಧ್ಯಕ್ಷ ಎಚ್.ಹನುಮಂತಪ್ಪ, ಸೇವಾದಳದ ಉಪಾಧ್ಯಕ್ಷ ಕೆ.ಆರ್.ಜಯದೇವಪ್ಪ ಉಪಸ್ಥಿತರಿದ್ದರು.


ಗುರುಸಿದ್ಧಸ್ವಾಮಿ

ಸಂಯುಕ್ತ ಕರ್ನಾಟಕ, ಬೆಂಗಳೂರು

1-9-2005

# ಭಾರತ ಸೇವಾದಳದ ಅಧ್ಯಕ್ಷರಾಗಿ ಎಚ್.ಎಂ. ಗುರುಸಿದ್ದಸ್ವಾಮಿ ಆಯ್ಕೆ

ಬೆಂಗಳೂರು, ಆ. 31- ಭಾರತ ಸೇವಾದಳದ ಅಧ್ಯಕ್ಷರಾಗಿ ಬಳ್ಳಾರಿಯ ನ್ಯಾಯವಾದಿ ಎಚ್.ಎಂ. ಗುರುಸಿದ್ದ ಸ್ವಾಮಿ ಆಯ್ಕೆಯಾಗಿದ್ದಾರೆ.

ಈಚೆಗೆ ಭಾರತ ಸೇವಾದಳದ ಕೇಂದ್ರ ಕಾರ್ಯಕಾರಿ ಸಮಿತಿ ಸಭೆ ಯಲ್ಲಿ ಇವರನ್ನು ಆಯ್ಕೆ ಮಾಡಲಾಗಿದೆ ಎಂದು ಸೇವಾದಳದ ಪ್ರಕಟಣೆ ತಿಳಿ ಸಿದೆ.

ಇದೇ ಸಂದರ್ಭದಲ್ಲಿ ಎಚ್.ಎಚ್. ದೇವರಾಜ್ (ಸಂಘಟನಾ ಕಾರ್ಯ ದರ್ಶಿ), ಡಬ್ಲ್ಯು.ಪಿ. ಕೃಷ್ಣ (ಕೋಶಾ ಧ್ಯಕ್ಷ), ಸಿ.ಎನ್.ಎನ್. ರಾಜು (ಸಂಚಾಲಕ) ಅವರನ್ನು ಆಯ್ಕೆ ಮಾಡ ಲಾಯಿತು.

## ನ.ಮ.ಸ.

# ರಕ್ತದಾನ ಶಿಬಿರ ಮತ್ತು ೨೦೦೫-೨೦೦೬ರ ಸಾಲಿನ ಚಟುವಟಿಕೆಗಳ ಉದ್ಘಾಟನೆ

# ರಕ್ತದಾನಿಗಳಿಗೆ ಹೃದಯಾಘಾತ ಆಗುವ ಸಂಭವ ಕಡಿಮೆ

**-ಡಬ್ಲ್ಯು.ಪಿ.ಕೃಷ್ಣ**

ಸ್ವಾತಂತ್ರ್ಯೋತ್ಸವ ದಿನದಂದು ಬಸವನಗುಡಿಯ ಶ್ರೀ ನಗರೇಶ್ವರ ಸ್ವಾಮಿ ಕಲ್ಯಾಣ ಮಂಟಪದಲ್ಲಿ ನಡೆದ ಕಾರ್ಯಕ್ರಮದಲ್ಲಿ ನಗರ್ತ ಮಹಿಳಾ ಸಂಘದ ೨೦೦೫-೦೬ರ ಸಾಲಿನ ಚಟುವಟಿಕೆಗಳನ್ನು ರಕ್ತದಾನ ಶಿಬಿರದ ಮೂಲಕ ಉದ್ಘಾಟಿಸಲಾಯಿತು. ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿಯ ಕರ್ನಾಟಕ ಶಾಖೆಯ ಸಹಕಾರದಿಂದ ರಕ್ತದಾನ ಶಿಬಿರ ನಡೆಯಿತು.

ನ.ಮ.ಸ. ಕಾರ್ಯದರ್ಶಿ ಶೈಲಜ ಉದಯಶಂಕರ್ ಅವರು ನಿರೂಪಿಸಿದ ಈ ಕಾರ್ಯಕ್ರಮ ಉಮಾದೇವಿ ಅಣ್ಣಯ್ಯಪ್ಪ ಮತ್ತು ಲಲಿತಾ ಮಂಜುನಾಥ್ ಅವರ ಪ್ರಾರ್ಥನೆಯೊಂದಿಗೆ ಆರಂಭವಾಯಿತು. ನ.ಮ.ಸ. ಅಧ್ಯಕ್ಷರಾದ ಸುನಂದ ರು.ಬಸಪ್ಪನವರು ಪ್ರಾಸ್ತಾವಿಕ ನುಡಿಗಳನ್ನಾಡಿ ಸ್ವಾಗತಿಸಿದರು.

ಸ್ವತಃ ೨೨ ಬಾರಿ ರಕ್ತದಾನ ಮಾಡಿರುವ ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌ|| ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ.ಕೃಷ್ಣ ಅವರು ಸ್ವಾತಂತ್ರ್ಯೋತ್ಸವ ದಿನದಂದು ಮಾನವ ಜೀವ ರಕ್ಷಕ ರಕ್ತ ಸಂಗ್ರಹ ಮಾಡಿ ದಾನ ಮಾಡುವ ಕಾರ್ಯಕ್ರಮ ಹಮ್ಮಿಕೊಂಡಿರುವ ಸಂಘದ ಕಾರ್ಯಕರ್ತರನ್ನು ಅಭಿನಂದಿಸಿದರು. "ಮಹಿಳೆಯರು ಸಂಘಟಿತರಾದರೆ ದೇಶ ತಾನಾಗಿ ಉದ್ಧಾರವಾಗುತ್ತದೆ. ನೀವು ಪುರುಷರೊಡನೆ ಪೈಪೋಟಿ ಮಾಡುವುದು ಬೇಡ, ಸಾಮರ್ಥ್ಯ ಹೆಚ್ಚಿಸಿಕೊಂಡರೆ ಸಾಕು, ಪುರುಷರನ್ನು ಮೀರಿಸುತ್ತೀರಿ, ಸಮಾಜದ ಆಸ್ತಿಯಾಗುತ್ತೀರಿ. ರಕ್ತದಾನದಿಂದ ದೇಹಕ್ಕೆ ಯಾವ ಹಾನಿಯೂ ಆಗೋಲ್ಲ. ರಕ್ತದಾನಿಗಳಲ್ಲಿ Heart Attack ಆಗುವ ಸಂಭವ ಕಡಿಮೆ. ರಕ್ತದಾನ ಮಾಡಿದರೆ ಹತ್ತಾರು ಜನರ ಜೀವ ಉಳಿಸುವುದಲ್ಲದೆ, ದಾನ ಮಾಡಿದ ವ್ಯಕ್ತಿಗೆ ಸಾರ್ಥಕತೆಯ ಮನೋಭಾವ ಉಂಟಾಗುತ್ತದೆ" ಎಂದು ಹೇಳಿದರಲ್ಲದೆ, ರೆಡ್‌ಕ್ರಾಸ್ ಸಂಸ್ಥೆಯ ಸೇವಾ ಚಟುವಟಿಕೆಗಳು ಹಾಗೂ ಸಂಸ್ಥೆ ನಡೆದು ಬಂದ ದಾರಿಯನ್ನು ಸಂಕ್ಷಿಪ್ತವಾಗಿ ವಿವರಿಸಿದರು. We cannot manufacture blood in any factory ಎಂದವರು ಅಭಿಪ್ರಾಯಪಟ್ಟರು.

ಶಿಬಿರದಲ್ಲಿ ಮುಖ್ಯ ಅತಿಥಿಯಾಗಿದ್ದ ಹಿರಿಯ ಸಮಾಜ ಸೇವಕಿ ಹಾಗೂ ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ಶಾಖೆಯ ಆಡಳಿತ ಮಂಡಳಿ ಸದಸ್ಯರಾದ ಮಧುರಾ ಅಶೋಕಕುಮಾರ್ ಅವರು "೧೮ರಿಂದ ೬೫ ವರ್ಷದ ಯಾವುದೇ ಆರೋಗ್ಯವಂತ ವ್ಯಕ್ತಿ ರಕ್ತದಾನ ಮಾಡಬಹುದು. ೬೫ರ ನಂತರವೂ ೭೦ನೇ ವಯಸ್ಸಿನವರೆಗೆ ಯಾವುದೇ ಕಾಯಿಲೆ ಇಲ್ಲದಿದ್ದವರು ರಕ್ತ ನೀಡಬಹುದು. ಪ್ರತಿ ನಿತ್ಯ ಅಪಘಾತ ಇತ್ಯಾದಿಗಳು ಹೆಚ್ಚು ಹೆಚ್ಚಾಗಿ ಆಗುತ್ತಿರುವಾಗ ರಕ್ತ ತೀರಾ ಅವಶ್ಯ. ರಕ್ತ ಕೊಟ್ಟಕ್ಷಣ ನಮ್ಮ ದೇಹ ದುರ್ಬಲವಾಗುವುದಿಲ್ಲ, ಹೊಸ ರಕ್ತ ಉತ್ಪತ್ತಿಯಾಗುತ್ತದೆ. ಇಂತಹ ಸಂಘ ಸಂಸ್ಥೆಗಳು ಈ ಬಗೆಗೆ ಜನರಲ್ಲಿ ಜಾಗೃತಿ ಮೂಡಿಸುತ್ತಿರುವುದು ಶ್ಲಾಘನೀಯ" ಎಂದು ಹೇಳಿದರು.

ಸಂಘದ ನಿಕಟಪೂರ್ವ ಅಧ್ಯಕ್ಷರಾದ ಇಂದಿರಾ ಶಿವಣ್ಣನವರು ರಕ್ತದಾನ ಅತ್ಯಂತ ಪವಿತ್ರವಾದ ದಾನ ಎಂದು ಅಭಿಪ್ರಾಯಪಟ್ಟು ನಿಮಗೆ ಅರ್ಹತೆ ಇರುವಷ್ಟರಲ್ಲಿ ರಕ್ತದಾನ ಮಾಡಿ ಎಂದು ಸಭಿಕರಿಗೆ ಕರೆ ನೀಡಿದರು. ರಕ್ತದಾನ ಶಿಬಿರವೊಂದರಲ್ಲಾದ ಕಹಿ ಅನುಭವವನ್ನೂ ವಿವರಿಸಿದರು.

ಅನ್ನದಾನ, ವಿದ್ಯಾದಾನಕ್ಕಿಂತಲೂ ಶ್ರೇಷ್ಠವಾದುದು ಮಾನವ ಕುಲರಕ್ಷಕ ರಕ್ತದಾನ ಎಂದು ನುಡಿದ ಎ.ಎಸ್.ಎ.ಎನ್.ಎ.ಸಂಘದ ಅಧ್ಯಕ್ಷ ಎ.ನಂಜುಂಡಪ್ಪನವರು ಒಂದು ಪವಿತ್ರ ಕಾರ್ಯ ಮಾಡುತ್ತಿರುವ ಮಹಿಳಾ ಸಂಘವನ್ನು ಶ್ಲಾಘಿಸಿ, ಸಂಘದ ಎಲ್ಲ ಕಾರ್ಯಕ್ರಮಗಳಿಗೆ ಎ.ಎಸ್.ಎ.ಎನ್.ಎ.ಸಂಘದ ಸಂಪೂರ್ಣ ಬೆಂಬಲವಿದೆ ಎಂದು ಘೋಷಿಸಿದರು.

ಅಧ್ಯಕ್ಷತೆ ವಹಿಸಿದ್ದ ಹಿರಿಯ ವೈದ್ಯೆ, ಕರ್ನಾಟಕ ಸರ್ಕಾರದ ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಇಲಾಖೆಯ ನಿ.ಜಂಟಿ ನಿರ್ದೇಶಕರು ಮತ್ತು ಖ್ಯಾತ ಸಾಹಿತಿಗಳಾದ ಡಾ|| ಲೀಲಾವತಿ ದೇವದಾಸ್ ಅವರು "ರಕ್ತದಾನದ ಬಗೆಗೆ ಅನೇಕ ತಪ್ಪು ಕಲ್ಪನೆಗಳಿವೆ. ಈಗ ರಕ್ತ ಮಾರಿಕೊಳ್ಳುವವರು ಇಲ್ಲ. Professional donors ರಕ್ತದಿಂದ ರೋಗಿಗಳಿಗೆ ಪ್ರಯೋಜನವಾಗೋಲ್ಲ. ಕಾಯಿಲೆಗಳಿಗೆ ಚಿಕಿತ್ಸೆ ಪಡೆಯುವುದಕ್ಕಿಂತಲೂ ಅವು ಬರದ ಹಾಗೆ ನೋಡಿಕೊಳ್ಳಿ. ಆರೋಗ್ಯ ಎಂದರೆ ರೋಗ ಇಲ್ಲದಿರುವುದು" ಎಂದು ಹೇಳಿದರು.

ಎ.ಎಸ್.ಎ.ಎನ್.ಎ.ಸಂಘದ ವಿದ್ಯಾರ್ಥಿ ವಿದ್ಯಾರ್ಥಿನಿಯರಲ್ಲದೆ, ಸಂಘದ ಕಾರ್ಯದರ್ಶಿ ಪಿ.ಸತೀಶ್, ನಿರ್ದೇಶಕ ಎ.ಪಿ.ರುದ್ರಪ್ಪ, ನ.ಮ.ಸ. ಕಾರ್ಯದರ್ಶಿ ಶೈಲಜ ಉದಯಶಂಕರ್, ನಗರ್ತ ಯುವಕ ಸಂಘದ ನಿರ್ದೇಶಕ ಪಿ.ನಟರಾಜ್, ನ.ಮ.ಸ. ಕಾರ್ಯಕಾರಿಣಿ ಸದಸ್ಯೆ ಲಲಿತಾಮಂಜುನಾಥ್, ಉಷಾ ಮತ್ತು ಜಯಪ್ರಕಾಶ್ ದಂಪತಿಗಳು, ಜೆ.ಎ.ವಿಜಯ ಮತ್ತು ಕೆ.ಮುರಳಿ ದಂಪತಿಗಳು, ಶ್ರೀ.ದೇ.ಸುನಂದ, ಸೀಮಂದರ ಮತ್ತು ಬಿ.ಕಿಶೋರ್ ಮೊದಲಾದವರು ರಕ್ತದಾನ ಮಾಡಿದರು.

II ಬೆಂಗಳೂರು ವಿಜಯ
ಮಂಗಳವಾರ 23 ಆಗಸ್ಟ್ 2005

# ರೆಡ್‌ಕ್ರಾಸ್‌ನಲ್ಲಿ 56ನೇ ವಾರ್ಷಿಕೋತ್ಸವ

ಬೆಂಗಳೂರು: ಭಾರತೀಯ ರೆಡ್ ಕ್ರಾಸ್ ಸಂಸ್ಥೆಯ ಕರ್ನಾಟಕ ರಾಜ್ಯ ಶಾಖೆಯು ಇತ್ತೀಚೆಗೆ ಜಿನೀವಾ ಒಪ್ಪಂದದ 56ನೇ ವಾರ್ಷಿಕೋತ್ಸವವನ್ನು ಆಚರಿಸಿತು.

ಕಾರ್ಯಕ್ರಮ ಉದ್ಘಾಟಿಸಿದ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಉಪಾಧ್ಯಕ್ಷ ಡಾ. ಎಸ್. ಚಂದ್ರಶೇಖರ ಶೆಟ್ಟಿ, ವಿಶ್ವದ 135 ರಾಷ್ಟ್ರಗಳು ಈ ಜಿನೀವಾ ಒಡಂಬಡಿಕೆಗೆ 12ನೇ ಆಗಸ್ಟ್ 1949ರಂದು ಸಹಿ ಮಾಡಿರುವ ಹಿನ್ನೆಲೆಯಲ್ಲಿ ಮಾನವನ ಹಕ್ಕುಗಳ ಸಂರಕ್ಷಣೆ, ಯುದ್ಧದಲ್ಲಿ ಗಾಯಗೊಂಡ ಸೈನಿಕರ ಹಾಗೂ ಯುದ್ಧ ಕೈದಿಗಳ ಹಿತರಕ್ಷಣೆ, ಜನಸಾಮಾನ್ಯರ ಆಸ್ತಿ ಪಾಸ್ತಿ, ಆಸ್ಪತ್ರೆ ಹಾಗೂ ಶಾಲಾ ಕಟ್ಟಡಗಳನ್ನು ಕಾಪಾಡುವ ನಿಟ್ಟಿನಲ್ಲಿ ರೆಡ್‌ಕ್ರಾಸ್ ವಿಶ್ವದೆಲ್ಲೆಡೆ ಶಾಂತಿಸ್ಥಾಪನೆ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗಿದೆ ಎಂದು ತಿಳಿಸಿದರು.




56ನೇ ವಾರ್ಷಿಕೋತ್ಸವ ಉದ್ಘಾಟನಾ ಸಮಾರಂಭದಲ್ಲಿ ಡಬ್ಲ್ಯು.ಪಿ. ಕೃಷ್ಣ ರಾಜು ಚಂದ್ರಶೇಖರ್, ಡಾ. ಎಸ್. ಚಂದ್ರಶೇಖರ್ ಶೆಟ್ಟಿ, ಡಾ. ಎನ್.ಕೆ. ವೆಂಕಟರಮಣ, ಸರೋಜಾ ನಂಜಪ್ಪ, ಡಾ. ಬಾಲಮಣಿ ಉಪಸ್ಥಿತರಿದ್ದರು.

ನರಶಾಸ್ತ್ರ ತಜ್ಞ ಡಾ. ಎನ್.ಕೆ. ವೆಂಕಟರಮಣ ಮಾತನಾಡಿ, ಇಂದಿನ ಆಧುನಿಕ ವ್ಯವಸ್ಥೆಯಲ್ಲಿ ತುರ್ತು ಸಂದರ್ಭಗಳು ಅನಿರೀಕ್ಷಿತವಾಗಿ ನಡೆದು ಬಂದಿವೆ. ಆದ್ದರಿಂದ ಪ್ರತಿಯೊಬ್ಬ ಪ್ರಜೆ ಹಾಗೂ ಸಂಘ ಸಂಸ್ಥೆಗಳು ಈ ರೀತಿಯ ತುರ್ತು ಸಂಧರ್ಭಗಳಲ್ಲಿ ನೊಂದ ವ್ಯಕ್ತಿಗಳಿಗೆ ತಕ್ಷಣ ಪ್ರಥಮ ಚಿಕಿತ್ಸೆ ಹಾಗೂ ವೈದ್ಯಕೀಯ ನೆರವು ನೀಡಿದಲ್ಲಿ ಎಷ್ಟೋ ಪ್ರಾಣಗಳನ್ನು ಉಳಿಸಬಹುದು ಎಂದು ನುಡಿದರು.

ಅಪಘಾತ, ಪ್ರಕೃತಿ ವಿಕೋಪಗಳಲ್ಲಿ ಪ್ರಾಣ ಹಾನಿ, ಗಾಯಗೊಂಡವರಿಗೆ ರಕ್ತದ ಅವಶ್ಯಕತೆ ಇರುವುದರಿಂದ ಪ್ರತಿಯೊಬ್ಬರೂ ರಕ್ತದಾನಕ್ಕೆ ಒತ್ತು ನೀಡಬೇಕು ಎಂದು ರಕ್ತನಿಧಿಯ ಅಧ್ಯಕ್ಷ ರಾಜು ಚಂದ್ರಶೇಖರ್ ತಿಳಿಸಿದರು.

ಗೌರವ ಖಜಾಂಚಿ ಕೆ.ಎಂ. ನಂಜಪ್ಪ, ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣ, ಗುಡ್‌ವಿಲ್ ಶಾಲೆಯ ವಿದ್ಯಾರ್ಥಿನಿಯರು ಭಾಗವಹಿಸಿದ್ದರು.

# ಸ್ವಾತಂತ್ರ್ಯೋತ್ಸವ

■ ಶೇಷಾದ್ರಿಪುರಂ ಶಿಕ್ಷಣ ಟ್ರಸ್ಟ್: ಧ್ವಜಾರೋಹಣ: ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ, ಅತಿಥಿ: ಪಿ. ಕೃಷ್ಣ ಸ್ಥಳ: ಕಾಲೇಜು ಆವರಣ, ಶೇಷಾದ್ರಿಪುರ. ಬೆಳಗ್ಗೆ 7.30.

ಸೋಮವಾರ, 1 ಆಗಸ್ಟ್ 2005

ಸೂರ್ಯೋದಯ



ಶೇಷಾದ್ರಿಪುರಂ ಪದವಿ ಕಾಲೇಜಿನ ಪತ್ರಿಕೋದ್ಯಮ ವಿಭಾಗದ ಚಟುವಟಿಕೆಗಳ ಉದ್ಘಾಟನಾ ಸಮಾರಂಭದಲ್ಲಿ ಪತ್ರಿಕೋದ್ಯಮಿ ನಾಗಮಣಿ ಎಸ್.ರಾವ್, ನಂದಿನಿ ಲಕ್ಷ್ಮಿನಾಥನ್, ಪ್ರಾಂಶುಪಾಲ ಡಾ.ಸಿ.ಎಲ್.ಎನ್.ಪ್ರಕಾಶ್, ಕಾಲೇಜಿನ ಗೌರವ ಕಾರ್ಯದರ್ಶಿ ವೂಡೆ ಪಿ.ಕೃಷ್ಣ, ಸಹಾಯಕ ಕಾರ್ಯದರ್ಶಿ ಆರ್.ಕೃಷ್ಣ ಇದ್ದಾರೆ.

ನಮ್ಮ ಬೆಂಗಳೂರು

ಉದಯವಾಣಿ

ಆಗಸ್ಟ್ 1, 2005

# ಪತ್ರಕರ್ತೆಗೆ ಸನ್ಮಾನ



ಬೆಂಗಳೂರು

**ಶೇ**ಷಾದ್ರಿಪುರಂ ಕಾಲೇಜಿನ ಪತ್ರಿಕೋದ್ಯಮ ವಿಭಾಗದ ಜರ್ನಲಿಸಂ ಕ್ಲಬ್‌ನ ಮೂರನೇ ವಾರ್ಷಿಕೋತ್ಸವ ಸಂದರ್ಭದಲ್ಲಿ ಈಚೆಗೆ ಹಮ್ಮಿಕೊಳ್ಳಲಾಗಿದ್ದ ಸಮಾರಂಭದಲ್ಲಿ ಈ ಸಾಲಿನ ಟಿಎಸ್‌ಆರ್ ಪ್ರಶಸ್ತಿ ವಿಜೇತ ಹಿರಿಯ ಪತ್ರಕರ್ತೆ ನಾಗಮಣಿ ಎಸ್. ರಾವ್ ಅವರನ್ನು ಸನ್ಮಾನಿಸಲಾಯಿತು.

ಬಳಿಕ ಮಾತನಾಡಿದ ನಾಗಮಣಿ ಅವರು, ಪತ್ರಿಕೋದ್ಯಮ ಈಗ ಹಿಂದಿನಂತಲ್ಲ. ಅದು ಕೆಲವೇ ಜನರಿಗೆ ಎಂಬಂಥ ಮಾತು ತನ್ನ ಪ್ರಸ್ತುತತೆ ಕಳೆದುಕೊಂಡಿದೆ. ವಿವಿಧ ಕಾಲೇಜು ಹಾಗೂ ವಿಶ್ವವಿದ್ಯಾಲಯಗಳಿಂದ ಹಲವಾರು ವಿದ್ಯಾರ್ಥಿಗಳು ಪತ್ರಿಕೋದ್ಯಮ ವ್ಯಾಸಂಗದಲ್ಲಿ ಪದವಿ ಪಡೆಯುತ್ತಿದ್ದಾರೆ. ಅಲ್ಲದೇ, ತಮ್ಮ ವಿವಿಧ ಮಾಧ್ಯಮಗಳಲ್ಲಿ ನೈಪುಣ್ಯತೆಯನ್ನು ತೋರಿಸುತ್ತಿದ್ದಾರೆ. ವಿದ್ಯಾರ್ಥಿನಿಯರೂ ಈ ಸ್ಪರ್ಧೆಯಲ್ಲಿ ಹಿಂದೆ ಬಿದ್ದಿಲ್ಲ ಎಂಬುದು ಗಮನಿಸತಕ್ಕ ಸಂಗತಿ ಎಂದು ಅಭಿಪ್ರಾಯಪಟ್ಟರು.ಸಮಾರಂಭದಲ್ಲಿ ಶಿಕ್ಷಣ ದತ್ತಿಯ ಮುಖ್ಯ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಸಹ ಕಾರ್ಯದರ್ಶಿ ಆರ್. ಕೃಷ್ಣ ಪ್ರಾಂಶುಪಾಲ ಡಾ|ಸಿ.ಎಲ್.ಎನ್. ಪ್ರಕಾಶ್, ಪತ್ರಿಕೋದ್ಯಮ ವಿಭಾಗದ ಮುಖ್ಯಸ್ಥೆ ನಂಧಿನಿ ಲಕ್ಷ್ಮಿಕಾಂತಾ ಮತ್ತಿತರರು ಉಪಸ್ಥಿತರಿದ್ದರು.

ಬೆಂಗಳೂರು ವಿಜಯ
ಮಂಗಳವಾರ 12 ಜುಲೈ 2005 III

# ವಿದ್ಯಾರ್ಥಿಯ ಯಶಸ್ಸಿಗೆ ಸಮಯಪ್ರಜ್ಞೆ ಅಗತ್ಯ

ಬೆಂಗಳೂರು: ಒಬ್ಬ ವಿದ್ಯಾರ್ಥಿ ಯಶಸ್ವಿಯಾಗಲು ಸಮಯಪ್ರಜ್ಞೆ, ಆಹಾರ, ವ್ಯಾಯಾಮ, ವಿರಾಮಗಳಲ್ಲಿ ಕಟ್ಟುನಿಟ್ಟಾಗಿರಬೇಕು ಎಂದು ಭಾರತೀಯ ವಿದ್ಯಾಭವನದ ಕಾರ್ಯನಿರ್ವಾಹಕ ನಿರ್ದೇಶಕ ಡಾ. ಮತ್ತೂರು ಕೃಷ್ಣಮೂರ್ತಿ ಅಭಿಪ್ರಾಯಪಟ್ಟಿದ್ದಾರೆ.

ಶೇಷಾದ್ರಿಪುರಂ ಪದವಿ ಕಾಲೇಜಿನ ಪ್ರಥಮ ಪದವಿ ತರಗತಿಗಳನ್ನು ಉದ್ಘಾಟಿಸಿ ಮಾತನಾಡಿದ ಅವರು, ವಿದ್ಯಾರ್ಥಿಗಳು ಪೋಷಕರ, ಅಧ್ಯಾಪಕರ ಮತ್ತು ಸಮಾಜಕ್ಕೆ ಋಣಿಯಾಗಿರಬೇಕು. ಸಮಾಜದ ದುಷ್ಟ ಮತ್ತು ದೈವಿಕ ಶಕ್ತಿಗಳ ಬಗ್ಗೆ ವಿಶ್ಲೇಷಿಸಿದ ಅವರು, ಈ ಶಕ್ತಿಗಳು 'ನಮ್ಮ ಅಂತರಂಗದೊಳಗೇ ಇದ್ದು, ದುಷ್ಟ ವಿಚಾರಗಳ ನಿಗ್ರಹವನ್ನು ಸ್ವತಃ ವಿದ್ಯಾರ್ಥಿಗಳೇ ಮಾಡಿ ಉತ್ತಮ ಪ್ರಜೆಗಳಾಗಿ ರೂಪುಗೊಳ್ಳಬೇಕು ಎಂದರು.

ಸಮಾರಂಭದಲ್ಲಿ ಶಿಕ್ಷಣ ಇಲಾಖೆ ಕಾಲೇಜು ಜಂಟಿ ನಿರ್ದೇಶಕ ಪ್ರೊ. ಈರಣ್ಣ, ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಕೆ.ಎಂ. ನಂಜಪ್ಪ, ಗೌರವ ಪ್ರಧಾನ ಕಾರ್ಯದರ್ಶಿ ಕೃಷ್ಣ ಇತರರು ಉಪಸ್ಥಿತರಿದ್ದರು. ಪ್ರಾಂಶುಪಾಲರಾದ ಡಾ. ಸಿ.ಎಲ್.ಎನ್. ಪ್ರಕಾಶ್ ಸ್ವಾಗತಿಸಿದರು.




ಶೇಷಾದ್ರಿಪುರಂ ಪ ಎ ಕಾಲೇಜಿನ ಪ್ರಥಮ ಪದವಿ ತರಗತಿಗಳ ಉದ್ಘಾಟನಾ ಸಮಾರಂಭದಲ್ಲಿ ಡಾ. ಮತ್ತೂರು ಕೃಷ್ಣಮೂರ್ತಿ, ಪ್ರೊ. ಈರಣ್ಣ ಉಪಸ್ಥಿತರಿದ್ದರು.

V.K

ಸೂರ್ಯೋದಯ

SURYODAYA KANNADA DAILY

e-mail : suryodayaedit@touchtelindia.net

NO.MAN(3) NPP/78/2004-05 RNI NO.12970/04 ಬೆಂಗಳೂರು ಭಾನುವಾರ, 10 ಜುಲೈ 2005 ಪುಟ: 10 + 4

# ಒಂದೇ ತಾಸಿನಲ್ಲಿ 216 ಸೀರೆ ಪೆಟ್ಟಿಗೆ ಪ್ಯಾಕ್



22ನೇ ಬಾರಿಗೆ ವಿಶ್ವ ದಾಖಲೆ ಸ್ಥಾಪಿಸಲು ಯತ್ನಿಸುತ್ತಿರುವ ಡಾ.ರಮೇಶ್ ಬಾಬು ಶನಿವಾರ ಬೆಂಗಳೂರಿನಲ್ಲಿ ಒಂದೇ ಗಂಟೆಯಲ್ಲಿ 216 ಸೀರೆ ಪೆಟ್ಟಿಗೆಗಳನ್ನು ಪ್ಯಾಕ್ ಮಾಡಿದರು.

ಬೆಂಗಳೂರು, ಜು.9- 'ಕೈಗಳು ಅತಿವೇಗವಾಗಿ ಹರಿದಾಡುತ್ತಿವೆ, ಕಣ್ಣುಗಳು ಸೂಕ್ಷ್ಮವಾಗಿ ಗಮನಿಸುತ್ತಿವೆ, ಕ್ಷಣಾರ್ಧದಲ್ಲಿ ಎದುರಿಗೆ ಇಟ್ಟಿದ್ದ ಸೀರೆ ತುಂಬುವ ರಟ್ಟಿನ ಪೆಟ್ಟಿಗೆ ಉಡುಗೊರೆ ಕಾಗದಗಳಿಂದ ಸುಂದರವಾಗಿ ಬಂಧನಕ್ಕೊಳಗಾಗುತ್ತದೆ.'

ಇಷ್ಟಕ್ಕೇ ಏನು ವಿಶೇಷ, ಇದು ಎಲ್ಲಾ ಸೀರೆ ಅಂಗಡಿಗಳಲ್ಲಿ ವ್ಯಾಪಾರಸ್ಥರು ಉಡುಗೊರೆ ಪ್ಯಾಕ್ ಹೀಗೆ ಮಾಡ್ತಾರೆ ಅಂದುಕೊಂಡ್ರಾ?

ಇದರಲ್ಲಿಯೂ ವಿಶೇಷತೆ ಇದೆ. ಇದು ತಮಾಷೆಗಾಗಿ ಮಾಡಿದ ಪ್ಯಾಕ್ ಅಲ್ಲ, ಇದು ಒಂದು ಕ್ಷಣವೂ ನಿಲ್ಲದೆ ನಿರಂತರವಾಗಿ ಮಾಡಿದ ಪ್ಯಾಕ್. ಅದೂ ಗಿನ್ನಿಸ್ ಪುಸ್ತಕದಲ್ಲಿ ದಾಖಲಿಸುವ ಸಲುವಾಗಿ ನಗರದ ಸ್ಟೆಲ್ಲಾ ಮೇರೀಸ್ ಪ್ರೌಢಶಾಲೆಯ ತುಂಬಿದ ಸಭಾಂಗಣದಲ್ಲಿ ಒಂದು ಗಂಟೆ ಅವಧಿಯಲ್ಲಿ 216 ಸೀರೆ ಬಾಕ್ಸ್‌ಗಳನ್ನು ಪ್ಯಾಕ್ ಮಾಡಿದ ಸಂದರ್ಭ.

ಗಿನ್ನಿಸ್ ದಾಖಲೆಯಲ್ಲಿ ಸುಮಾರು 21 ಬಾರಿ ಹೆಸರು ದಾಖಲಿಸಿಕೊಂಡ ನಗರದ ನಿವಾಸಿ ಡಾ.ಎಸ್.ರಮೇಶ್ ಬಾಬು ತಮ್ಮ 22ನೇ ಸಾಧನೆಯಾಗಿ ಒಂದು ಗಂಟೆಯಲ್ಲಿ 216 ಸೀರೆ ಬಾಕ್ಸ್‌ಗಳನ್ನು ಉಡುಗೊರೆ ಕಾಗದದಿಂದ ಪ್ಯಾಕ್ ಮಾಡುವ ಮೂಲಕ ವಿಶ್ವದ ಯಾರೂ ಮಾಡದ ಸಾಧನೆಯನ್ನು ಮಾಡಿ ಗಿನ್ನಿಸ್ ಪುಸ್ತಕದಲ್ಲಿ ಸ್ಥಾನ ಪಡೆದುಕೊಳ್ಳಲಿದ್ದಾರೆ.

ಆರಂಭದಲ್ಲಿ ಒಂದು ನಿಮಿಷದಲ್ಲಿ ನಾಲ್ಕು ಪ್ಯಾಕ್ ಮಾಡುತ್ತಾ ಹೋದ ರಮೇಶ್ ಬಾಬು, ನೆರೆದಿದ್ದ ಜನಸಮೂಹ ನೋಡುನೋಡುತ್ತಿದ್ದಂತೆ ಒಂದು ಗಂಟೆಯಲ್ಲಿ 216 ಪ್ಯಾಕ್ ಮಾಡಿಯೇ ಬಿಟ್ಟರು. 180 ಪ್ಯಾಕ್ ಮಾಡುವ ಗುರಿಯನ್ನು ಹೊಂದಿದ್ದ ವರು ತಮ್ಮ ಗುರಿಗಿಂತ ಹೆಚ್ಚು 36 ಪ್ಯಾಕ್‌ಗಳನ್ನು ಮಾಡಿ ದಾಖಲೆ ತೋರಿದರು.

ಇದೇ ಉಡುಗೊರೆ : ಶನಿವಾರ ರಮೇಶ್ ಬಾಬು ದಂಪತಿಗಳ ವಿವಾಹ ವಾರ್ಷಿಕೋತ್ಸವವೂ ಆಗಿದ್ದು ಈ ಸಾಧನೆಯೇ ಪತ್ನಿಗೆ ನೀಡಿದ ಉಡುಗೊರೆಯಾಗಿದೆ ಎಂದು ರಮೇಶ್ ಬಾಬು ಹೇಳಿದರು.

ಸಾಧನೆ ಕಂಡು ನೆರೆದಿದ್ದ ಪ್ರೌಢಶಾಲಾ ವಿದ್ಯಾರ್ಥಿಗಳ ಸಮೂಹ ಸಂತೋಷದಿಂದ 'ಕಂಗ್ರಾಜುಲೇಷನ್ಸ್' ಹೇಳಿತು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳ ಪ್ರಧಾನ ಕಾರ್ಯದರ್ಶಿ ವುಡೆ ಪಿ.ಕೃಷ್ಣ ಮುಖ್ಯ ಅತಿಥಿಯಾಗಿದ್ದರು. ಜವಾಹರಲಾಲ್ ನೆಹರು ವಿಜ್ಞಾನ ಸಂಶೋಧನಾ ಕೇಂದ್ರದ ಆರೋಗ್ಯಾಧಿಕಾರಿ ಡಾ. ಕವಿತಾ ಶ್ರೀಧರ್, ಫ್ಲಾರೆನ್ಸ್ ಪ್ರೌಢಶಾಲೆಯ ಮುಖ್ಯೋಪಾಧ್ಯಾಯಿನಿ ಅನುರಾಧ ರಾಮಚಂದ್ರನ್, ಒಂದ್ನಿಮಿಷ ಉಮಾ ಖ್ಯಾತಿಯ ಸೌಂದರ್ಯ ತಜ್ಞೆ ಉಮಾಜಯಕುಮಾರ್ ಈ ಸಾಧನೆಯನ್ನು ದಾಖಲಿಸಿದರು.

ಸೂರ್ಯೋದಯ

ಮಂಗಳವಾರ, 5 ಜುಲೈ 2005



ಶೇಷಾದ್ರಿಪುರಂ ಪದವಿ ಕಾಲೇಜಿನ ಪದವಿ ಪೂರ್ವ ತರಗತಿಗಳನ್ನು ಭಾರತೀಯ ವಿದ್ಯಾಭವನದ ಕಾರ್ಯಕಾರಿ ಅಧ್ಯಕ್ಷ ಡಾ.ಮತ್ತೂರು ಕೃಷ್ಣಮೂರ್ತಿ ಉದ್ಘಾಟಿಸಿದರು. ಜಂಟಿ ಕಾರ್ಯದರ್ಶಿ ಪ್ರೊ.ಈರಣ್ಣ ಶಿಕ್ಷಣ ದತ್ತಿ ಗೌರವ ಕಾರ್ಯದರ್ಶಿ ವೂಡೇ ಪಿ.ಕೃಷ್ಣ ಉಪಸ್ಥಿತರಿದ್ದರು.

ಸಂಜೆವಾಣಿ

ಮಂಗಳವಾರ 5 ಜುಲೈ 2005

# ಪ್ರೊ. ರಮೇಶ್‌ಬಾಬು ಇನ್ನೊಂದು ದಾಖಲೆ ಪ್ರಯತ್ನ

ಬೆಂಗಳೂರು, ಜು. ೪- ಈಗಾಗಲೇ ಗಿನ್ನಿಸ್ ದಾಖಲೆಗೆ ಪಾತ್ರರಾಗಿರುವ ಪ್ರೊ. ಎಸ್. ರಮೇಶ್‌ಬಾಬು ಅವರು ಜು. 9ರಂದು ಕೇವಲ ಒಂದು ಗಂಟೆಯಲ್ಲಿ 180 ಸೀರೆಗಳನ್ನು ಬಾಕ್ಸ್‌ನಲ್ಲಿ ಹಾಕಿ ಗಿಫ್ಟ್ ಪ್ಯಾಕ್ ಮಾಡಿ ಗಿನ್ನಿಸ್ ದಾಖಲೆಗೆ ಸೇರುವ ಯತ್ನ ನಡೆಸಲಿದ್ದಾರೆ.

ಜು. 9ರಂದು ಬೆಳಗ್ಗೆ 11.30ಕ್ಕೆ ಸದಾಶಿವನಗರದ ಈಜುಕೊಳದ ಎದುರಿರುವ ಸ್ಟೆಲ್ಲಾ ಮೇರಿಸ್ ಹೈಸ್ಕೂಲ್‌ನ ಒಳಾಂಗಣ ಸಭಾಂಗಣದಲ್ಲಿ ರಮೇಶ್‌ಬಾಬು ಅವರು ಅತ್ಯಂತ ವೇಗವಾಗಿ ಗಿಫ್ಟ್ ಪ್ಯಾಕ್ ಮಾಡುವ ಮೂಲಕ 22ನೇ ಬಾರಿ ವಿಶ್ವದಾಖಲೆ ಮಾಡುವ ಪ್ರಯತ್ನ ನಡೆಸಲಿದ್ದಾರೆ. ಅಂದು ಮುಖ್ಯ ಅತಿಥಿಗಳಾಗಿ ರಾಜ್ಯೋತ್ಸವ ಪ್ರಶಸ್ತಿ ವಿಜೇತ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳ ಪ್ರಧಾನ ಕಾರ್ಯದರ್ಶಿ ಡಬ್ಲ್ಯೂ.ಟಿ. ಕೃಷ್ಣ, ಮತ್ತಿತರರು ಪಾಲ್ಗೊಳ್ಳಲಿದ್ದಾರೆ.

ಮೂಲತಃ ಭೂ ವಿಜ್ಞಾನಿಯಾಗಿರುವ ರಮೇಶ್‌ಬಾಬು ಅವರು ಈಗಾಗಲೇ 21 ಬಾರಿ ವಿಶ್ವದಾಖಲೆ ಮತ್ತು 7 ಬಾರಿ ರಾಷ್ಟ್ರೀಯ ದಾಖಲೆಗೈದ ಸಾಧನೆ ಮಾಡಿದ್ದಾರೆ.

# ವ್ಯಕ್ತಿ ಪರಿಚಯ

## ವೂಡೇ ಪಿ. ಕೃಷ್ಣ

ತಂತ್ರಜ್ಞ, ಶಿಕ್ಷಣ ತಜ್ಞ ಹಾಗೂ ಸಮಾಜ ಸೇವಕ

ಶೈಕ್ಷಣಿಕ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಅವಿರತವಾಗಿ ತಮ್ಮನ್ನು ತೊಡಗಿಸಿಕೊಂಡವರು ತಂತ್ರಜ್ಞ, ಶಿಕ್ಷಣ ತಜ್ಞ ಹಾಗೂ ಸಮಾಜಸೇವಕ ವೂಡೇ ಪಿ. ಕೃಷ್ಣ ರವರು.



1963ರಲ್ಲಿ ಬೆಂಗಳೂರಿನಲ್ಲಿ ಜನಿಸಿದ ಇವರು ಮೈಸೂರಿನ ಹಸ ರಾಂತ ಶ್ರೀ ರಾಮಕೃಷ್ಣ ವಿದ್ಯಾಶಾಲೆ ಯಲ್ಲಿ ಶಾಲಾ ಶಿಕ್ಷಣ ಪಡೆದು ಬಿ.ಇ., ಎಂ.ಎಸ್. (ಇಂಜನಿಯರಿಂಗ್) ಹಾಗೂ ಕಾನೂನು ಪದವಿ ಗಳಿಸಿದ್ದಾರೆ. ಇವರ ತಂದೆ ಡಬ್ಲ್ಯೂ.ಹೆಚ್. ಪುಟ್ಟಯ್ಯನವರು ಹಿರಿಯ ಸ್ವಾತಂತ್ರ್ಯ ಯೋಧರು ಹಾಗೇ ತಾತನವರಾದ ದಿ. ಡಬ್ಲ್ಯೂ.ಹೆಚ್. ಹನುಮಂತಪ್ಪನವರು ಸಹ ಸ್ವಾತಂತ್ರ್ಯ ಯೋಧರಾಗಿದ್ದು ಬೆಂಗಳೂರಿನ ಪುರಸಭಾಧ್ಯಕ್ಷರು, ಮೈಸೂರು ಪ್ರಜಾಪ್ರತಿನಿಧಿ ಸಭಾ ಸದಸ್ಯರು ಹಾಗೂ ವಿಧಾನಸಭಾ ಸದಸ್ಯರು ಆಗಿದ್ದವರು.

ವೃತ್ತಿಯಲ್ಲಿ ಚಾರ್ಟರ್ಡ್ ಇಂಜನಿಯರ್ ಆಗಿರುವ ಕೃಷ್ಣ ಅವರು ಪ್ರತಿಷ್ಠಿತ ಶೇಷಾದ್ರಿಪುರಂ ಸಮೂಹ ಶಿಕ್ಷಣ ಸಂಸ್ಥೆಗಳ ಗೌರವ ಪ್ರಧಾನ ಕಾರ್ಯದರ್ಶಿಗಳಾಗಿದ್ದಾರೆ. ಅಲ್ಲದೆ ಕರ್ನಾಟಕ ರಾಜ್ಯ ಖಾಸಗಿ ಸ್ನಾತಕೋತ್ತರ ಮಹಾವಿದ್ಯಾಲಯಗಳ ಸಂಘದ ಉಪಾಧ್ಯಕ್ಷರಾಗಿ, ಭಾರತೀಯ ರೆಡ್ ಕ್ರಾಸ್ ಸೊಸೈಟಿ ಖಜಾಂಚಿಗಳಾಗಿ ಹಾಗೂ ಗಾಂಧಿ ಶಾಂತಿ ಪ್ರತಿಷ್ಠಾನದ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಹಾಲಿ ಭಾರತ ಸೇವಾದಲದ ಕೇಂದ್ರ ಸಮಿತಿ ಕೋಶಾಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇದಲ್ಲದೆ ರಾಜ್ಯದ ಹಲವಾರು ಸೇವಾಪರ ಸಂಸ್ಥೆಗಳಲ್ಲಿ ಪ್ರಮುಖ ಸದಸ್ಯರಾಗಿ ಪದಾಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿದ್ದು ನಾಡಿನ ಗಣ್ಯ ವ್ಯಕ್ತಿಗಳಲ್ಲಿ ಒಬ್ಬರೆನಿಸಿದ್ದಾರೆ. ಸಮುದಾಯ ಸೇವೆಗಾಗಿ 1989ರಲ್ಲಿ ರಾಜ್ಯ ಯುವ ಪ್ರಶಸ್ತಿ, ಶಿಕ್ಷಣ ಕ್ಷೇತ್ರದ ಸೇವೆಗಾಗಿ 2002ರಲ್ಲಿ ಕೆಂಪೇಗೌಡ ಪ್ರಶಸ್ತಿ ಹಾಗೂ ಸಮಾಜ ಸೇವೆಗಾಗಿ 2004ರಲ್ಲಿ ಕರ್ನಾಟಕ ಸರ್ಕಾರದ ಪ್ರತಿಷ್ಠಿತ ರಾಜ್ಯೋತ್ಸವ ಪ್ರಶಸ್ತಿ ಇವರಿಗೆ ದೊರೆತಿದೆ.

ವಿಳಾಸ: 391/1, 8ನೇ ಅಡ್ಡರಸ್ತೆ, 13ನೇ ಮುಖ್ಯರಸ್ತೆ, ರಾಜಮಹಲ್ ವಿಲಾಸ್ ಬಡಾವಣೆ, ಸದಾಶಿವನಗರ, ಬೆಂಗಳೂರು- 560 080, ದೂರವಾಣಿ: 23618406

# ನಗುವಿನ ಗುಣ

ನಗುವು ಶರೀರ, ಮನಸ್ಸುಗಳ ಉತ್ಸುಕತೆಗಳ ಸಮತೋಲನವನ್ನು ಮಾಡುವ ಕ್ರಿಯೆ. ನಗುವಿನಿಂದ ಕೇವಲ ತಮಾಷೆ, ಮನೋರಂಜನೆ ದೊರೆಯುವುದು ಮಾತ್ರವಲ್ಲ. ಶರೀರದ ಮಾಂಸಖಂಡಗಳಿಗೆ ಅನಾಯಾಸವಾದ ಸಡಿಲಿಕೆ ದೊರೆಯುತ್ತದೆ. ರಕ್ತನಾಳಗಳು ಹಿಗ್ಗಿ, ಎಲ್ಲ ಭಾಗಗಳಿಗೆ ಹೆಚ್ಚಿನ ರಕ್ತ ಪೂರೈಕೆಯಾಗುತ್ತದೆ.

ನಮಗೆ ಹಠಾತ್ತನೆ ಬರುವ ಕೋಪ, ಆತಂಕ, ಖಿನ್ನತೆಗಳೆಲ್ಲ ಶರೀರದ ರೋಗ ನಿರೋಧಕ ವ್ಯವಸ್ಥೆಯ ಮೇಲೆ ದಾಳಿಮಾಡಿ, ಅದನ್ನು ಕುಗ್ಗಿಸಿಬಿಡುತ್ತದೆ. ನಗುವಿನಿಂದ ನಮ್ಮ ಶರೀರದಲ್ಲಿರುವ ನೈಸರ್ಗಿಕವಾಗಿ ಕೊಲ್ಲುವ ಜೀವಕೋಶಗಳ ಗಣತಿ ಹೆಚ್ಚಾಗುವುದನ್ನು ಕಂಡು ಹಿಡಿದಿದ್ದಾರೆ. ನಗು ನಗುತ್ತಾ ಇರುವುದರಿಂದ ಆಗುವ ಲಾಭಗಳು ಹಲವಾರು.

- ☺ ನಗು ಶರೀರಕ್ಕೆ ಅತ್ಯುತ್ತಮ ವ್ಯಾಯಾಮ.
- ☺ ಖಿನ್ನತೆ, ಆತಂಕ, ಮನೋದೈಹಿಕ ತೊಂದರೆಗಳಿಂದ ಬಿಡುಗಡೆ.
- ☺ ರಕ್ತದ ಅತಿ ಒತ್ತಡ ಕಡಿಮೆಯಾಗುತ್ತದೆ.
- ☺ ಹೃದ್ರೋಗಗಳು ಸಂಭವ ಕಡಿಮೆ.
- ☺ ಬ್ರಾಂಕೈಟಿಸ್ ಮತ್ತು ಅಸ್ತಮಾಕ್ಕೆ ಪರಿಣಾಮಕಾರಿ.
- ☺ ಕ್ರೀಡಾಪಟುಗಳ ಸಾಮರ್ಥ್ಯ ಹೆಚ್ಚಾಗುತ್ತದೆ.
- ☺ ಹಾಡುಗಾರರಿಗೆ ಬಹೂಪಯೋಗಿ.
- ☺ ನಗುನಗುತಾ ಇರುವವರು ನಗದವರಿಗಿಂತ ವಯಸ್ಸಿನಲ್ಲಿ ಕಿರಿಯರಂತೆ ಕಾಣುತ್ತಾರೆ.
- ☺ ವ್ಯಕ್ತಿತ್ವ ಸುಧಾರಣೆ, ಆತ್ಮವಿಶ್ವಾಸ ಹೆಚ್ಚಾಗುತ್ತದೆ.
- ☺ ನಮ್ಮ ಸೀಮಿತವಲ್ಲದ ಸಾಮರ್ಥ್ಯ ನಮಗೇ ತಿಳಿಯುತ್ತದೆ.
- ☺ ನಗುವು ಬಳಕೆದಾರರ ಮಿತ್ರ ನಗುವು ವಿಶ್ವಭಾಷೆ. ನಗುವ ಅವಕಾಶಗಳನ್ನು ಉಪಯೋಗಿಸಿಕೊಳ್ಳಿ.
- ☺ ಜೋಕುಗಳನ್ನು, ಹಾಸ್ಯ ಚಟಾಕಿಗಳನ್ನು ಕೇಳಿ ನಕ್ಕುಬಿಡಿ.
- ☺ ಹಾಸ್ಯಮೇಳಗಳಿಗೆ ಹೋಗಿ.
- ☺ ಕಾಮಿಡಿ ಸಿನಿಮಾ, ನಾಟಕಗಳನ್ನು ನೋಡಿ.
- ☺ ಹಾಸ್ಯ ಸಾಹಿತ್ಯ, ನಾಟಕ, ಲೇಖನಗಳನ್ನು ಓದುವ ಹವ್ಯಾಸ ಬೆಳೆಸಿಕೊಳ್ಳಿ.

ನಗುನಗುತ್ತಾ ನಿಮ್ಮ ಸಹಪಾಠಿಗಳನ್ನು ನಗಿಸಿ.

ಈ ಸಂಜೆ

ಭಾನುವಾರ ೧೩-೧೧-೨೦೦೫



ಬೆಂಗಳೂರಿನ ಡಿವಿಜಿ ವೇದಿಕೆ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಸಮಾಜ ಸೇವಕ ಡಬ್ಲ್ಯೂ ಕೃಷ್ಣಾ ಮತ್ತು ಎಪಿಎಂಸಿ ಕಾರ್ಯದರ್ಶಿ ಹಾಗೂ ಲೇಖಕರೂ ಆದ ಶರಶ್ಚಂದ್ರ ರಾನಡೆ ಅವರಿಗೆ ಡಿವಿಜಿ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಲೇಖಕಿ ಸಂಧ್ಯಾಶರ್ಮ, ಡಾ. ಸೋಮಶೇಖರ್, ವೇದಿಕೆ ಅಧ್ಯಕ್ಷೆ ಲಲಿತಾ ರಂಗಸ್ವಾಮಿ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ, ಬೆಂಗಳೂರು

3-7-2005




ಬೆಂಗಳೂರಿನ ಶೇಷಾದ್ರಿಪುರಂ ಪದವಿ ಕಾಲೇಜಿನ ಪ್ರಥಮ ಪದವಿ ಪೂರ್ವ ತರಗತಿಗಳ ಉದ್ಘಾಟನಾ ಸಮಾರಂಭದಲ್ಲಿ ಭಾರತೀಯ ವಿದ್ಯಾಭವನದ ಕಾರ್ಯ ನಿರ್ವಾಹಕ ಅಧ್ಯಕ್ಷ ಡಾ. ಮತ್ತೂರು ಕೃಷ್ಣಮೂರ್ತಿ, ಪ್ರೊ. ಈರಣ್ಣ ಮತ್ತಿತರರು ಉಪಸ್ಥಿತರಿದ್ದರು.

ಉದಯವಾಣಿ

ಜುಲೈ 2, 2005

# 'ಮಾನವೀಯ ಮೌಲ್ಯವೇ ಶಿಕ್ಷಣದ ಗುರಿ'

ಬೆಂಗಳೂರು

ವಿದ್ಯೆಯೆಂದರೆ ಕೇವಲ ಪಠ್ಯಪುಸ್ತಕಗಳನ್ನು ಓದುವುದಲ್ಲ. ಅದರ ಜೊತೆಗೆ ಸಾಹಿತ್ಯಿಕ ಪುಸ್ತಕಗಳ ಅಧ್ಯಯನದಿಂದ ವಿದ್ಯಾರ್ಥಿಗಳು ತಮ್ಮ ಜ್ಞಾನ ವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳಬೇಕು. ಪರಿಣಾಮಕಾರಿ ಅಧ್ಯಯನದಿಂದ ಜೀವನಶೈಲಿಯನ್ನು ಉನ್ನತೀಕರಿಸುವುದು ಶಿಕ್ಷಣದ ಮೂಲ ಉದ್ದೇಶ.

ಇತ್ತೀಚೆಗೆ ಶೇಷಾದ್ರಿಪುರಂ ಸಂಜೆ ಪದವಿಪೂರ್ವ ಕಾಲೇಜಿನ ಪ್ರಥಮ ಪಿಯುಸಿ ಉದ್ಘಾಟನಾ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಿ ಮಾತನಾಡಿದ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿ ಜರಗನಹಳ್ಳಿ ಶಿವಶಂಕರ್ ಅವರ ಅರ್ಥಪೂರ್ಣ ನುಡಿಗಳಿವು. ಸಂಜೆ ಕಾಲೇಜಿನಲ್ಲಿ ವಿದ್ಯಾರ್ಥಿಗಳು ಕೇವಲ ಪದವಿ ಪಡೆಯುವ ಉದ್ದೇಶದಿಂದ ಅಧ್ಯಯನ ಮಾಡದೇ, ಜೀವನದಲ್ಲಿ



ಅಮೂಲ್ಯ ಮಾನವೀಯ ಗುಣಗಳನ್ನು ಬೆಳೆಸಿಕೊಳ್ಳಲು ಪ್ರಯತ್ನಿಸಬೇಕು ಎಂದು ಕರೆ ನೀಡಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಕೆ.ಎಂ. ನಂಜಪ್ಪ ಅಧ್ಯಕ್ಷತೆ ವಹಿಸಿದ್ದರು. ಕಾಲೇಜಿನ ಪ್ರಾಂಶುಪಾಲ ಪ್ರೊ. ಎನ್. ಬೈರೇಗೌಡ, ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ, ಆಡಳಿತ ಮಂಡಳಿಯ ಸಲಹೆಗಾರ ವೀರಭದ್ರಯ್ಯ ಮುಂತಾದವರು ಉಪಸ್ಥಿತ ರಿದ್ದರು.

ಉಷಾ ಕಿರಣ

ನಗರದ ಒಳನೋಟ

ಮಂಗಳವಾರ, ಮೇ 17, 2005, ಬೆಂಗಳೂರು




ಇತ್ತೀಚೆಗೆ ನಡೆದ ವಿಶ್ವ ರೆಡ್ ಕ್ರಾಸ್ ದಿನಾಚರಣೆಯಲ್ಲಿ, ರಾಜ್ಯೋತ್ಸವ ಪ್ರಶಸ್ತಿ ವಿಜೇತ ಡಬ್ಲ್ಯು. ಪಿ. ಕೃಷ್ಣ ಅವರಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವ ಎನ್. ಚೆಲುವರಾಯಸ್ವಾಮಿ ಸನ್ಮಾನಿಸಿದರು. ರಾಜ್ಯ ರೆಡ್ ಕ್ರಾಸ್ ಸಂಸ್ಥೆ ಉಪಾಧ್ಯಕ್ಷ ಡಾ. ಎಸ್. ಚಂದ್ರಶೇಖರ್ ಶೆಟ್ಟಿ ಪ್ರಧಾನ ಕಾರ್ಯದರ್ಶಿ ಡಾ. ಎನ್. ಜಿ. ನಾರಾಯಣ ಉಪಸ್ಥಿತರಿದ್ದರು.

ಪುಟ ೩, ಆಂದೋಲನ, ೨೬ನೇ ಜೂನ್, ೨೦೦೫

# ನಾಗಮಂಗಲ: ೧೫೦೦ ಮಂದಿಗೆ ಅಂಗವಿಕಲತೆ ತಪಾಸಣೆ

ನಾಗಮಂಗಲ, ಜೂ.೨೫- ಪಟ್ಟಣದಲ್ಲಿ ಇತ್ತೀಚೆಗೆ ಜರುಗಿದ ಅಂಗವಿಕಲತೆಯ ತಪಾಸಣಾ ಶಿಬಿರದಲ್ಲಿ ೧೫೦೦ ಮಂದಿಗೆ ತಪಾಸಣೆ ನಡೆಸಿ ೩೦೦ ಮಂದಿಗೆ ಸಾಧನ ಸಲಕರಣೆ ವಿತರಿಸಲು ಆಯ್ಕೆ ಮಾಡಲಾಗಿದೆ.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ, ಜಿಲ್ಲಾ ಪುನರ್ವಸತಿ ಕೇಂದ್ರ ಮತ್ತು ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ ಈ ಶಿಬಿರವನ್ನು ಆಯೋಜಿಸಿದ್ದವು.

ಆಯ್ಕೆಗೊಂಡ ಫಲಾನುಭವಿಗಳಿಗೆ ನಾಳೆ(ಜೂ.೨೬) ಬೆಳಿಗ್ಗೆ ೧೧ ಘಂಟೆಯಿಂದ ೧ ಘಂಟೆವರೆಗೆ ಇಲ್ಲಿನ ಪದವಿ ಪೂರ್ವ ಕಾಲೇಜಿನ ಆವರಣದಲ್ಲಿ ವಿತರಿಸಲಾಗುವುದು.

೬೦ ಮಂದಿಗೆ ಟ್ರೈಸಿಕಲ್, ೩೫ ಮಂದಿಗೆ ವ್ಹೀಲ್ ಚೇರ್, ೭೫ ಮಂದಿಗೆ ಶ್ರವಣ ಸಾಧನ, ೫೦ ಮಂದಿಗೆ ಕಂಕಳು ಸಾಧನ, ೨೫ ಮಂದಿಗೆ ವಾಕಿಂಗ್ ಸ್ಟಿಕ್, ೩೦ ಮಂದಿಗೆ ಕ್ರಚಸ್ ಮತ್ತು ೧೦ ಮಂದಿಗೆ ಬ್ಲೈಂಡ್ ಸ್ಟಿಕ್ ನೀಡಲಾಗುತ್ತದೆ.

ಆಯ್ಕೆಯಾಗಿರುವ ಫಲಾನುಭವಿಗಳು ವಾರ್ಷಿಕ ವರಮಾನದ ದೃಢೀಕರಣ ಪತ್ರ, ವೈದ್ಯ ದೃಢೀಕರಣ, ಅಂಗವಿಕಲತೆ ಕಾಣುವ ೪ ಫೋಟೋ ಮತ್ತು ನೋಂದಣಿ ಪತ್ರವನ್ನು ಕಡ್ಡಾಯವಾಗಿ ತರುವಂತೆ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ.ಎಸ್. ವಿಶ್ವಂತ್‌ಕುಮಾರ್ ತಿಳಿಸಿದ್ದಾರೆ.

ನಾಳೆ ನಡೆಯಲಿರುವ ಸಮಾರಂಭವನ್ನು ಜಿಲ್ಲಾ ಉಸ್ತುವಾರಿ ಸಚಿವ ಎನ್.ಚಲುವರಾಯಸ್ವಾಮಿ ಉದ್ಘಾಟಿಸಲಿದ್ದು, ಜಿಲ್ಲಾಧಿಕಾರಿ ಸಿ.ಎನ್.ಸೀತಾರಾಂ ಅಧ್ಯಕ್ಷತೆ ವಹಿಸುವರು. ಮುಖ್ಯ ಅತಿಥಿಗಳಾಗಿ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಪ್ರಧಾನ ಕಾರ್ಯದರ್ಶಿ ಡಾ.ಎನ್.ಜಿ.ನಾರಾಯಣ, ಸದಸ್ಯ ಡಬ್ಲ್ಯು.ಪಿ ಕೃಷ್ಣ, ಜಿಲ್ಲಾ ಶಾಖಾ ಉಪಾಧ್ಯಕ್ಷೆ ಮೀರಾ ಶಿವಲಿಂಗಯ್ಯ, ತಾ.ಪಂ. ಅಧ್ಯಕ್ಷೆ ಭಾಗ್ಯಮ್ಮ ಕೃಷ್ಣಪ್ಪ, ಪ.ಪಂ. ಅಧ್ಯಕ್ಷೆ ನಾಗರತ್ನಮ್ಮ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಸಹಾಯಕ ನಿರ್ದೇಶಕ ವಿಜಯ ಕುಮಾರ್ ಪಾಲ್ಗೊಳ್ಳುವರು.

## ೩೦ರಂದು ನಾಗಮಂಗಲದಲ್ಲಿ ಅಂಗವಿಕಲರಿಗೆ ಸಲಕರಣೆ ವಿತರಣೆ

ನಾಗಮಂಗಲ, ಜೂ.೨೫- ಜಿಲ್ಲಾ ರೆಡ್‌ಕ್ರಾಸ್ ಸಂಸ್ಥೆ, ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರ, ಮಹಿಳಾ ಮತ್ತು ಮಕ್ಕಳಅಭಿವೃದ್ಧಿ ಇಲಾಖೆ ಇವುಗಳ ಸಂಯುಕ್ತಾಶ್ರಯದಲ್ಲಿ ಅಂಗವಿಕಲರಿಗೆ ಸಾಧನ- ಸಲಕರಣೆ ವಿತರಣಾ ಸಮಾರಂಭ ಪಟ್ಟಣದ ಸಾರ್ವಜನಿಕ ಆಸ್ಪತ್ರೆ ಆವರಣದಲ್ಲಿ ಮಧ್ಯಾಹ್ನ ೧೨ ಘಂಟೆಗೆ ನಡೆಯಲಿದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವ ಹಾಗೂ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ರಾಜ್ಯ ಶಾಖೆ ಛೇರ್ಮನ್ ಎನ್.ಚಲುವರಾಯ್ಸಸ್ವಾಮಿ ಉದ್ಘಾಟನೆ ನೆರವೇರಿಸಲಿದ್ದಾರೆ. ಜಿಲ್ಲಾಧಿಕಾರಿ ಸೀತಾರಾಂ ಅಧ್ಯಕ್ಷತೆ ವಹಿಸಲಿದ್ದಾರೆ.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ರಾಜ್ಯ ಶಾಖೆ ಕಾರ್ಯದರ್ಶಿ ಎನ್.ಜಿ.ನಾರಾಯಣ, ಆಡಳಿತ ಮಂಡಳಿ ಸದಸ್ಯ ಡಬ್ಲ್ಯು.ಪಿ.ಕೃಷ್ಣ, ಜಿಲ್ಲಾ ಶಾಖೆ ಉಪಾಧ್ಯಕ್ಷೆ ಮೀರಾ ಶಿವಲಿಂಗಯ್ಯ, ತಾ.ಪಂ.ಅಧ್ಯಕ್ಷೆ ಭಾಗ್ಯಮ್ಮ ಕೃಷ್ಣಪ್ಪ, ಪುರಸಭಾಧ್ಯಕ್ಷೆ ನಾಗರತ್ನಮ್ಮ ತಮ್ಮಯ್ಯ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಉಪನಿರ್ದೇಶಕ ಎನ್.ಆರ್.ವಿಜಯ್ ಹಾಗೂ ರಾಕೇಶ್, ರಾಜನ್ ಮತ್ತಿತರರು ಮುಖ್ಯಅತಿಥಿಗಳಾಗಿ ಪಾಲ್ಗೊಳ್ಳಲಿದ್ದಾರೆ.



ನಗರದಲ್ಲಿ ಇಂದು ಬ್ರಹ್ಮ ಸಮಾಜ ಆಯೋಜಿಸಿದ್ದ ರಾಜರಾಂ ಮೋಹನ್‌ರಾಯ್ ಅವರ 233 ನೇ ಜನ್ಮ ದಿನಾಚರಣೆ ಪ್ರಯುಕ್ತ ಮೋಹನ ರಾಯ್ ಪ್ರತಿಮೆಗೆ ಮಾಲಾರ್ಪಣೆ ಮಾಡಲಾಯಿತು. ಸಮಿತಿಯ ಡಬ್ಲ್ಯೂ ಪಿ. ಕೃಷ್ಣ, ಡಬ್ಲ್ಯೂ ರಾಮಕೃಷ್ಣ, ದೇವಕುಮಾರ್, ಮರಿಬಸಯ್ಯ ಮುಂತಾದವರು ಉಪಸ್ಥಿತರಿದ್ದರು.

# ಈ ಸಂಜೆ

ಶುಕ್ರವಾರ ೧೭-೬-೨೦೦೫




ವಿಶ್ವ ಸ್ವಯಂ ರಕ್ತದಾನಿಗಳ ದಿನಾಚರಣೆ ಪ್ರಯುಕ್ತ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ರಾಜ್ಯ ಶಾಖೆ ಹಮ್ಮಿಕೊಂಡಿದ್ದ ರಕ್ತದಾನ ಶಿಬಿರದಲ್ಲಿ ಸೆಂಟ್ ಜಾನ್ ಫಾರ್ಮಸಿ ಕಾಲೇಜಿನ ವಿದ್ಯಾರ್ಥಿಗಳು ರಕ್ತದಾನ ಮಾಡಿದರು. ಡಬ್ಲ್ಯೂ.ಪಿ.ಕೃಷ್ಣ, ಆರ್.ಕೃಷ್ಣ, ಮಧುರಾ ಅಶೋಕ್‌ಕುಮಾರ್, ಸರೋಜ ನಂಜಪ್ಪ, ರಕ್ತನಿಧಿ ಸಂಸ್ಥೆ ಅಧ್ಯಕ್ಷ ರಾಜುಚಂದ್ರಶೇಖರ್, ಎನ್.ಜಿ.ನಾರಾಯಣ ಮತ್ತಿತರರು ಉಪಸ್ಥಿತರಿದ್ದರು.

ಬೆಂಗಳೂರು ದಿನಾಂಕ: 3-06-2005 ಸುದ್ದಿ ಮೃದಂಗ ಶುಕ್ರವಾರ

# ಸಮುದಾಯದ ಸಹಭಾಗತ್ವದಿಂದ ಶಿಕ್ಷಣದ ಪ್ರಗತಿ ಸಾಧ್ಯ: ವೂಡೇ ಪಿ.ಕೃಷ್ಣ

ಬೆಂಗಳೂರು, ಜೂ. 2- ಶಿಕ್ಷಣವೂ ಸಮುದಾಯದ ಸಹಭಾಗತ್ವದಿಂದ ಮಾತ್ರ ಪ್ರಗತಿ ಹೊಂದಲು ಸಾಧ್ಯವೆಂದು ಶೇಷಾದ್ರಿ ಪುರಂ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ ವೂಡೇ ಪಿ.ಕೃಷ್ಣರವರು ಕರೆ ನೀಡಿದರು.

ಅವರು ಕೆಂಗೇರಿ ಉಪ ನಗರದಲ್ಲಿನ ಶೇಷಾದ್ರಿಪುರಂ ಪದವಿಪೂರ್ವ ಕಾಲೇಜಿನ ಹೊಸದಾಗಿ ಪ್ರವೇಶಪಡೆದ ವಿದ್ಯಾರ್ಥಿಗಳನ್ನು ಕುರಿತು ಮಾತನಾಡುತ್ತಾ ಶಿಕ್ಷಣ ಕ್ಷೇತ್ರದ ಅಭಿವೃದ್ಧಿಗೆ ನಾವೆಲ್ಲ ಗಮನಹರಿಸಿದರೆ ಅದರ ಅಭಿವೃದ್ಧಿ ಹೊಸ ಶಕೆ ಆರಂಭಿಸಿದಂತೆಯೇ ಅದಕ್ಕಾಗಿ ನಾವು ಎಲ್ಲಾ ವರ್ಗದ ವಿದ್ಯಾರ್ಥಿಗಳಿಗೆ ಅನುಕೂಲ ವಾಗುವಂತೆ ಶಿಕ್ಷಣದಲ್ಲಿ ಸವಲತ್ತು ದೊರಕುವಂತೆ ಮಾಡಿ ಆ ಮೂಲಕ ಉನ್ನತ ವ್ಯಾಸಂಗಕ್ಕೆ ಪ್ರೋತ್ಸಾಹ ನೀಡುವುದು ನಮ್ಮ ಜವಾಬ್ದಾರಿ ಎಂದರು.

ಜ್ಞಾಪಕ ಶಕ್ತಿ ಒಂದು ಮಾನಸಿಕ ಕ್ರಿಯೆ ಅಥವಾ ಮಾನಸಿಕ



ಸಾಮರ್ಥ್ಯ, ಅನುಭವಾತ್ಮಕ ಜ್ಞಾನವನ್ನು ಉಳಿಸಿಕೊಂಡಮೇಲೆ ಅವಶ್ಯವಾದಾಗ ಅದನ್ನು ನೆನಪಿಸಿಕೊಳ್ಳುವುದೇ ಸ್ಮೃತಿ. ಕಲಿಕೆ ಅರ್ಥವಾಗದಿದ್ದರೇ ಅದು ಖಂಡಿತವಾಗಿ ಸ್ಮೃತಿ ಪಟಲದಲ್ಲಿ ಉಳಿಯುತ್ತದೆ. ಕಲಿಕೆ ಅರ್ಥಪೂರ್ಣ ವಾಗಲು ಆಸಕ್ತಿಯಿಂದ ಕಲಿತಾಗ ಮಾತ್ರ ಸಾಧ್ಯ ಎಂದು ನುಡಿದರು.

ಜೀವಿತದ ವ್ಯಾಪ್ತಿಯಲ್ಲಿ ಎಲ್ಲಾ ಅವಸ್ಥೆಗಳು ಮುಖ್ಯವಾದರೂ ಸಹ ಕೌಮಾರ್ಯವಸ್ಥೆ ಬಹು ಪ್ರಾಮುಖ್ಯ ವಾಗಿರುತ್ತದೆ. ಈ ಹಂತದಲ್ಲಿ ಅವರ ಭೌತಿಕ, ಶಾರೀರಿಕ ಹಾಗೂ ಮಾನಸಿಕ ಬೆಳವಣಿಗೆ ತೀವ್ರತರವಾಗಿರುತ್ತದೆ. ಈ ಸಮಯದಲ್ಲಿ ಗೊಂದಲಮಯ ಆಲೋಚನೆ ಹಾಗೂ ಚಟುವಟಿಕೆಗಳ ನಿಯಂತ್ರಣವನ್ನು ಒಂದು ರೂಪಕ್ಕೆ ತರುವ ಗುರುತರವಾದ ಜವಾಬ್ದಾರಿ ನಮ್ಮದು ಎಂದು ಡಬ್ಲ್ಯೂ.ಪಿ.ಕೃಷ್ಣನುಡಿದರು.

ಸ್ನಾತಕೋತ್ತರ ಕನ್ನಡ ವಿಭಾಗದ ಪ್ರಾಧ್ಯಾಪಕ ಪ್ರೊ| ದೊಡ್ಡರಂಗೇಗೌಡರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ರಂಗ ವೈಭವ ಕುಮಾರಸ್ವಾಮಿಯವರು ಜಾನಪದ ಹಾಡಿದರು.

ವೇದಿಕೆಯಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಸಹಾಯಕ ಕಾರ್ಯದರ್ಶಿಗಳಾದ ಆರ್.ಕೃಷ್ಣ, ಧರ್ಮದರ್ಶಿಗಳಾದ ಬಿ.ಎ. ಅನಂತರಾಮ್, ಎಸ್.ವೀರಬದ್ರಯ್ಯ ಹಾಜರಿದ್ದರು.

ಕಾಲೇಜಿನ ಪ್ರಾಂಶುಪಾಲ ಪ್ರೊ| ಕೆ.ವಿ.ನಾರಾಯಣಮೂರ್ತಿ ಕಾಲೇಜಿನ ಪರಿಚಯ ಮಾಡಿಕೊಟ್ಟರು. ಶ್ರೀಮತಿ ರಾಧಿಕಾ ಪ್ರಾರ್ಥಿಸಿದರು. ಕೆ.ಜಿ. ನಂದೀಶ್ ಸ್ವಾಗತಿಸಿ, ಕೆ.ಆರ್.ಗೋಪಾಲ್ ವಂದಿಸಿದರು. ಶ್ರೀಮತಿ ಲತಾದೇವಿಯವರು ಕಾರ್ಯಕ್ರಮ ನಿರೂಪಿಸಿದರು.

9-5-2005 ಸಂಯುಕ್ತ ಕರ್ನಾಟಕ, ಬೆಂಗಳೂರು

# ಸ್ತ್ರೀಶಕ್ತಿ ಗುಂಪಿಗೂ ಯಶಸ್ವಿನಿ ವಿಸ್ತರಣೆ

ಬೆಂಗಳೂರು, ಮೇ 8- ಸ್ತ್ರೀಶಕ್ತಿ ಗುಂಪುಗಳಿಗೆ ಹಾಗೂ ಕಡುಬಡವರಿಗೆ ಯಶಸ್ವಿನಿ ನಿಯೋಜನೆಯನ್ನು ವಿಸ್ತರಿಸಲಾಗುವುದು ಎಂದು ಆರೋಗ್ಯ ಸಚಿವ ಎನ್. ಚೆಲುವರಾಯಸ್ವಾಮಿ ತಿಳಿಸಿದ್ದಾರೆ.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ರೆಡ್‌ಕ್ರಾಸ್ ದಿನಾಚರಣೆಯ ಅಂಗವಾಗಿ ರಾಜಭವನದಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದ ನಂತರ ಸುದ್ದಿಗಾರರಿಗೆ ಅವರು ಈ ವಿಷಯ ತಿಳಿಸಿದರು.

ಈಗಾಗಲೇ ಜಾರಿಯಲ್ಲಿರುವ ಯೋಜನೆಯಲ್ಲಿ ಕೆಲವು ನ್ಯೂನತೆಗಳಿದ್ದು ಅವುಗಳನ್ನು ಸರಿಪಡಿಸಿ ಕೂಲಿ ಕಾರ್ಮಿಕರು, ಪರಿಶಿಷ್ಟ ಜಾತಿ ಮತ್ತು ವರ್ಗ ಮತ್ತು ಬಡತನ ರೇಖೆಗಿಂತ ಕೆಳಗಿರುವ ಎಲ್ಲರಿಗೂ ಈ ಯೋಜನೆಯನ್ನು ವಿಸ್ತರಿಸಲಾಗುವುದು.

ಈ ಸಂಬಂಧ ಐದು ಇಲಾಖಾ ಸಚಿವರ ಜತೆ ಮತ್ತು ಅಧಿಕಾರಿಗಳ ಜೊತೆ ಚರ್ಚಿಸಿ ಅಂತಿಮ ತೀರ್ಮಾನ ತೆಗೆದುಕೊಳ್ಳಲಾಗುವುದು ಎಂದವರು ತಿಳಿಸಿದರು.

ಈಗ ಸದ್ಯಕ್ಕೆ 149 ಆಸ್ಪತ್ರೆಗಳಲ್ಲಿ ಈ ಯೋಜನೆ ಜಾರಿಯಲ್ಲಿದೆ. ಅರ್ಹ ಜಿಲ್ಲಾ ಆಸ್ಪತ್ರೆಗಳಿಗೂ ಈ ಯೋಜನೆಯನ್ನು ವಿಸ್ತರಣೆ ಮಾಡಲಾಗುವುದು ಎಂದವರು ತಿಳಿಸಿದರು.

ಇಲಾಖೆಯಲ್ಲಿ ಹಲವಾರು ಹುದ್ದೆಗಳು ಖಾಲಿ ಇದ್ದು ಇನ್ನೊಂದು ವರ್ಷದೊಳಗಾಗಿ ಈ ಹುದ್ದೆಗಳನ್ನು ತುಂಬಲು ಕ್ರಮಕೈಗೊಳ್ಳಲಾಗುವುದು ಎಂದ ಅವರು ಬೇಸಿಗೆ ಕಾಲದಲ್ಲಿ ಬರುವ ಕಾಲರಾ, ಮಲೇರಿಯಾ ಮುಂತಾದ ರೋಗಗಳ ಬಗ್ಗೆ ಮುನ್ನೆಚ್ಚರಿಕೆ ಕ್ರಮಕೈಗೊಳ್ಳಲಾಗಿದೆ ಎಂದರು.

ಬೌರಿಂಗ್ ಆಸ್ಪತ್ರೆಯಲ್ಲಿ ಏಡ್ಸ್ ರೋಗದ ಹತೋಟಿಗೆ ನೀಡಬೇಕಾದ ಔಷಧ ಕೊರತೆ, ರೋಗಿಗಳನ್ನು ಸೂಕ್ತ ರೀತಿಯಲ್ಲಿ ನೋಡಿಕೊಳ್ಳದಿರುವ ಬಗ್ಗೆ ಮಾಹಿತಿ ತರಿಸಿಕೊಡು ಪರಿಶೀಲನೆ ನಡೆಸುವುದಾಗಿ ಅವರು ತಿಳಿಸಿದರು.

**ಸನ್ಮಾನ:** ಇದಕ್ಕೂ ಮುನ್ನ ನಡೆದ ಸಮಾರಂಭದಲ್ಲಿ ಅಂಗವಿಕಲರಿಗೆ ತ್ರಿಚಕ್ರ ವಾಹನಗಳನ್ನು ಹಾಗೂ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಧನಸಹಾಯವನ್ನು ನೀಡಿ ಸಚಿವರು ಪುರಸ್ಕರಿಸಿದರು.

ಇದೇ ಸಂದರ್ಭದಲ್ಲಿ ರಾಜ್ಯೋತ್ಸವ ಪ್ರಶಸ್ತಿ ಪಡೆದ ಡಬ್ಲ್ಯು.ಪಿ. ಕೃಷ್ಣ, ಮಾಲತೇಶ ಶೆಟ್ಟಿ, ಪ್ರೊ. ಬಿ. ಬಸವರಾಜ್‌ರವರನ್ನು ಸನ್ಮಾನಿಸಲಾಯಿತು ಹಾಗೂ ಸುನಾಮಿ ಸಂತ್ರಸ್ತರಿಗೆ ರೆಡ್‌ಕ್ರಾಸ್ ಮೂಲಕ ಧನಸಹಾಯ ಮಾಡಿದ ದಾನಿಗಳಿಗೆ ಪ್ರಶಸ್ತಿ ಪತ್ರ ನೀಡಿ ಗೌರವಿಸಲಾಯಿತು.

ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿಯ ಕರ್ನಾಟಕ ಘಟಕದ ಉಪಾಧ್ಯಕ್ಷ ಡಾ. ಎಸ್. ಚಂದ್ರಶೇಖರ್, ರಕ್ತ ನಿಧಿ ಪ್ರತಿಷ್ಠಾನದ ಅಧ್ಯಕ್ಷ ರಾಜು ಚಂದ್ರಶೇಖರ್ ಉಪಸ್ಥಿತರಿದ್ದರು.



*ವಿಶ್ವ ರೆಡ್‌ಕ್ರಾಸ್ ದಿನಾಚರಣೆ ಅಂಗವಾಗಿ ಭಾನುವಾರ ಬೆಂಗಳೂರಿನಲ್ಲಿ ಆರೋಗ್ಯ ಸಚಿವ ಎನ್. ಚೆಲುವರಾಯಸ್ವಾಮಿ ಅವರು ಮೈಸೂರಿನ ಅಂಗವಿಕಲನಿಗೆ ತ್ರಿಚಕ್ರವಾಹನ ನೀಡಿದ ಸಂದರ್ಭದಲ್ಲಿ ರೆಡ್‌ಕ್ರಾಸ್ ಸಂಸ್ಥೆಯ ಚಂದ್ರಶೇಖರ್ ಮೊದಲಾದವರು ಹಾಜರಿದ್ದರು.*



ಬೆಂಗಳೂರಿನ ಸಮಾಜ ಸೇವಾ ಸಂಸ್ಥೆ ಹಮ್ಮಿಕೊಂಡಿದ್ದ ಸಮಾರಂಭದಲ್ಲಿ ಸುಮಂಗಲಿ ಸೇವಾಶ್ರಮದ ಸಂಸ್ಥಾಪಕಿ ಸುಶೀಲಮ್ಮ ಅವರನ್ನು ಸನ್ಮಾನಿಸಲಾಯಿತು.

## ರಾಜ್ಯ ಪ್ರಶಸ್ತಿ ಪುರಸ್ಕೃತ

# ವಿದ್ಯಾರ್ಥಿಗಳೆಲ್ಲರ ಮೆಚ್ಚಿನ ಡಬ್ಲ್ಯೂ.ಪಿ.ಕೃಷ್ಣ

ಈ ಬಾರಿ ನಾನಾ ಒತ್ತಡಗಳಿಗೊಳಗಾದ ಮುಖ್ಯಮಂತ್ರಿ ಧರ್ಮಸಿಂಗ್ ನವೆಂಬರ್ 1 ರಂದು 110 ಮಂದಿಗೆ ರಾಜ್ಯೋತ್ಸವ ಪ್ರಶಸ್ತಿಗಳನ್ನು ನೀಡಬೇಕಾಯಿತು. ಇವರಲ್ಲಿ ಬಹಳಷ್ಟು ಜನ ಆ ಪ್ರಶಸ್ತಿಗೆ ಎಲ್ಲ ರೀತಿಗಳಿಂದಲೂ ಅರ್ಹರು ಎಂಬುದು ಸುಳ್ಳಲ್ಲ. ಅತ್ಯಂತ ಅರ್ಹರ ಸಾಲಿಗೆ ಸೇರುವವರು ಡಬ್ಲ್ಯೂ.ಪಿ.ಕೃಷ್ಣ ಶೇಷಾದ್ರಿಪುರ ಶಿಕ್ಷಣ ದತ್ತಿಯ ಗೌ॥ ಪ್ರಧಾನ ಕಾರ್ಯದರ್ಶಿಯಾಗಿರುವ 41ರ ಪ್ರಾಯದ (ಜನನ : 01.02.1963) ಇವರು 20ನೇ ವಯಸ್ಸಿನಲ್ಲೇ ದತ್ತಿಯ ಸದಸ್ಯರಾದರು.

1992ರಲ್ಲಿ ಟ್ರಸ್ಟಿ ಆಗಿ ಆಯ್ಕೆಗೊಂಡು, 1995ರಲ್ಲಿ ಜಂಟಿ ಕಾರ್ಯದರ್ಶಿ ಪದವಿಗೆ ನಾಯಿತರಾದರು. ತಮ್ಮ ಪಾಲಿನ ಕೆಲಸಗಳನ್ನು ಅಚ್ಚುಕಟ್ಟಾಗಿ, ಶಿಸ್ತಿನಿಂದ ನಿರ್ವಹಿಸಿದ ಶ್ರೀಯುತರು 2001ರಲ್ಲಿ ಗೌ॥ ಪ್ರಧಾನ ಕಾರ್ಯದರ್ಶಿಯಾಗಿ ಆಯ್ಕೆಯಾಗಿ, ಶೇಷಾದ್ರಿ ವಿದ್ಯಾಸಂಸ್ಥೆಗಳ ಕೀರ್ತಿ ಹೆಚ್ಚಿಸುವ ದಿಸೆಯಲ್ಲಿ ತಮ್ಮನ್ನು ತೊಡಗಿಸಿ ಕೊಂಡಿದ್ದಾರೆ.

ಸ್ವಾತಂತ್ರ್ಯ ಹೋರಾಟಗಾರರ ಮನೆತನದಿಂದ ಬಂದಿರುವ ಆಧುನಿಕ ಬೆಂಗಳೂರಿನ ನಿರ್ಮಾಪಕರಲ್ಲೊಬ್ಬರೆನಿಸಿಕೊಂಡಿರುವ ಸ್ವಾತಂತ್ರ್ಯ ಹೋರಾಟಗಾರರ ಡಬ್ಲ್ಯೂ.ಎಚ್. ಹನುಮಂತಪ್ಪನವರ ಮೊಮ್ಮಗ. ಗಾಂಧಿನಗರದ ಪ್ರಮುಖ ರಸ್ತೆಯೊಂದಕ್ಕೆ ಡಬ್ಲ್ಯೂ.ಎಚ್. ಹನುಮಂತಪ್ಪ ರಸ್ತೆ ಎಂದು ಹೆಸರಿಡಲಾಗಿದೆ) ಡಬ್ಲ್ಯೂ.ಪಿ.ಕೃಷ್ಣ ಅವರು (ಡಬ್ಲ್ಯೂ. ಎಚ್.ಪುಟ್ಟಯ್ಯ ಮತ್ತು ದೊಡ್ಡಮ್ಮಯ್ಯ ದಂಪತಿಗಳ ಪುತ್ರ) ಹಾಗೂ ಅವರ ಐವರು ಸೋದರರು - ಎಲ್ಲರೂ ಉತ್ತಮ ಶಿಕ್ಷಣ ಪಡೆದಿದ್ದಾರೆ. ಆದರೆ ಯಾರೂ ಸರ್ಕಾರಿ ನೌಕರಿಗಳನ್ನವಲಂಬಿಸದೆ, ಸ್ವಯಂ ಉದ್ಯೋಗಿಗಳಾಗಿದ್ದಾರೆ.

ಮಹಾತ್ಮ ಗಾಂಧೀಜಿಯವರೇ ನನ್ನ ಪಾಲಿನ ಅತ್ಯಂತ ಆದರ್ಶ ವ್ಯಕ್ತಿ ಎಂದು ಭಾವಿಸಿರುವ ಕೃಷ್ಣ ಅವರಿಗೆ ಟಿ. ಸಿದ್ದಲಿಂಗಯ್ಯ ಮೊದಲಾದ ಸ್ವಾತಂತ್ರ್ಯ ಸೇನಾನಿಗಳಲ್ಲಿ ಅಪರಿಮಿತ ಭಕ್ತಿ, ಗೌರವ, ರಾಷ್ಟ್ರದ ಎಲ್ಲ ಸಮಸ್ಯೆಗಳಿಗೂ ಶಿಕ್ಷಣವೇ ಪರಿಹಾರ ಎಂದು ಹೇಳುತ್ತಿದ್ದ ಸ್ವಾಮಿ ವಿವೇಕಾನಂದರೇ ಇವರಿಗೆ ಸ್ಫೂರ್ತಿ. ಶಿಕ್ಷಣವನ್ನು ಮನಸಾರೆ ಪ್ರೀತಿಸುವ ಇವರು ಮಾನವ ಸೇವೆಯನ್ನೇ ಗುರಿಯಾಗಿಸಿಕೊಂಡಿದ್ದು, ಒಳ್ಳೆಯ ಪುಸ್ತಕ, ಪತ್ರಿಕೆಗಳನ್ನು ಓದುವ ಹಾಗೂ ಒಳ್ಳೊಳ್ಳೆಯ ಉಪನ್ಯಾಸಗಳನ್ನು ಕೇಳುವ (ಸ್ವತಃ ಉತ್ತಮವಾಗಿ) ಸದಭಿರುಚಿ ಬೆಳೆಸಿಕೊಂಡಿದ್ದಾರೆ. ಬಸವ ಸಮಿತಿ ಸದಸ್ಯರಾಗಿದ್ದಾರೆ.

ರಾಮಕೃಷ್ಣ ವಸತಿ ಶಾಲೆಯಲ್ಲಿ ಪ್ರೌಢಶಾಲೆಯವರೆಗೆ ವ್ಯಾಸಂಗ ಮಾಡಿ, ಬೆಂಗಳೂರು ವಿ.ವಿ.ದ ಬಿ.ಇ., ಎಲ್.ಎಲ್.ಬಿ., ಪದವೀಧರರಾಗಿರುವ ಡಬ್ಲ್ಯೂ.ಪಿ. ಕೃಷ್ಣ ಅವರಿಗೆ ಫುಟ್‌ಬಾಲ್‌ನಲ್ಲಿ ಆಸಕ್ತಿ, ವಿದ್ಯಾರ್ಥಿ ದೆಸೆಯಲ್ಲಿ ಫುಟ್‌ಬಾಲ್ ಆಟಗಾರರಾಗಿದ್ದರು. ಸಾರ್ವಜನಿಕ ಸಮಸ್ಯೆಗಳ ಬಗೆಗೆ ಪ್ರಮುಖ ಪತ್ರಿಕೆಗಳ ವಾಚಕರವಾಣಿ ವಿಭಾಗಕ್ಕೆ ಪತ್ರಗಳನ್ನು ಬರೆಯುತ್ತಿದ್ದರು. ಪೈಂಟಿಂಗ್‌ನಲ್ಲೂ ಅಭಿರುಚಿ ಬೆಳೆಸಿಕೊಂಡು, ಆ ವಿಷಯದಲ್ಲಿ ಹೈಯರ್ ಗ್ರೇಡ್ ಡಿಪ್ಲೋಮಾ ಮಾಡಿದ್ದಾರೆ. ರಾಜ್ಯ ಯುವ ಪ್ರಶಸ್ತಿ (1989), ಕೆಂಪೇಗೌಡ ಪ್ರಶಸ್ತಿ (2002) ಸೇರಿದಂತೆ ಅನೇಕ ಪ್ರಶಸ್ತಿಗಳನ್ನು ತಮ್ಮದಾಗಿಸಿ ಕೊಂಡಿದ್ದಾರೆ.

1991ರಲ್ಲಿ ವಿವಾಹವಾದ ಇವರಿಗೆ (ಪತ್ನಿ/ ಸಿವತಾ) ಶೇಷಾದ್ರಿಪುರ ಶಿಕ್ಷಣ ಸಂಸ್ಥೆಗಳ ಮೇಲೆ ಇನ್ನಿಲ್ಲದ ಮೋಹ, ಇವರ ತಂದೆಯವರೂ ಆ ಸಂಸ್ಥೆಯ ಉಪಾಧ್ಯಕ್ಷರಾಗಿದ್ದರು. ನರ್ಸರಿಯಿಂದ ಸ್ನಾತಕೋತ್ತರದವರೆಗೆ ಒಟ್ಟು 16000 ವಿದ್ಯಾರ್ಥಿಗಳು, 800 ಸಿಬ್ಬಂದಿ ವರ್ಗದವರಿದ್ದು ಎಲ್ಲರನ್ನೂ ಕೃಷ್ಣ ಅವರು ತಮ್ಮ ಸ್ವಂತ ಕುಟುಂಬದವರಂತೆ ಭಾವಿಸುತ್ತಾರೆ. 1930ರಲ್ಲಿ ಸ್ಥಾಪನೆಯಾದ ಶೇಷಾದ್ರಿಪುರ ಶಿಕ್ಷಣ ದತ್ತಿಯ ಟ್ರಸ್ಟಿಯಾಗಿ 1950ರಲ್ಲಿ ಆಯ್ಕೆಯಾದ ಕೆ.ಎಂ. ನಂಜಪ್ಪನವರು ಮೂವತ್ತು ವರ್ಷಗಳ ಕಾಲ ಅಧ್ಯಕ್ಷರಾಗಿ ಅತ್ಯಂತ ಪ್ರಾಮಾಣಿಕತೆಯಿಂದ ಸೇವೆ ಸಲ್ಲಿಸಿದ್ದಾರೆ. (ಈಗಲೂ ಅವರೇ ಅಧ್ಯಕ್ಷರು). ಅವರ ಮಾರ್ಗದರ್ಶನದಲ್ಲಿ ಡಬ್ಲ್ಯೂ.ಪಿ.ಕೃಷ್ಣ ಅವರು ಸಂಸ್ಥೆಯನ್ನು ಮುನ್ನಡೆಸುತ್ತಿದ್ದಾರೆ.



---

ಪುಟ 5 ರಿಂದ ....

ಸಂಪ್ರದಾಯಗಳನ್ನು ಕಟ್ಟುಪಾಡುಗಳನ್ನು ಅಥವಾ ನಿಯಮಗಳನ್ನು ಉಳಿಸಿಕೊಳ್ಳೋಣ. ಆದರೆ ದುಃಖಕ್ಕೆ ಕಾರಣವಾಗಬಹುದಾದ ಮತ್ತು ನ್ಯಾಯ ಸಮ್ಮತವಲ್ಲದ ಆಚಾರಹೀನ ಸಂಪ್ರದಾಯಗಳನ್ನೂ ನಂಬಿಕೆಯಗಳನ್ನೂ ನಡವಳಿಕೆಗಳನ್ನೂ ಬದಿಗೊತ್ತಿ ನಡೆದರೆ ಎಷ್ಟೋ ಕುಟುಂಬಗಳು ದುಃಖಕ್ಕೆ ಈಡಾಗುವುದನ್ನು ತಪ್ಪಿಸಬಹುದಲ್ಲವೆ? ಮನುಷ್ಯನ ಬಾಳಿನಲ್ಲಿ ಧರ್ಮರಕ್ಷಣೆ ಮಾನವ ಧರ್ಮವಾಗಿರಬೇಕಲ್ಲವೆ?

## ಬಾಳಿನಲ್ಲಿ ಸಫಲತೆ

ಈ ದುಃಖಮಯ ಪ್ರಪಂಚದಲ್ಲಿ ಮನುಷ್ಯನಿಗೆ ಪರೋಪಕಾರಾರ್ಥಂ ಇದಂ ಶರೀರಂ ಎಂಬ ದೈವಿಕ ಭಾವನೆಯನ್ನು ಬೆಳೆಸಿಕೊಂಡು, ತನ್ನವರು ಮತ್ತು ಪರರರು ದುಃಖಕ್ಕೆ ಈಡಾಗದಂತೆ ಮಾಡುವುದು ಮತ್ತು ಸಾಧ್ಯವಾದಷ್ಟು ಮಟ್ಟಿಗೆ ಇತರರ ದುಃಖವನ್ನು ಶಮನ ಮಾಡುವುದು ಅಥವಾ ನಿವಾರಿಸುವುದು ಅಥವಾ ಕಡಿಮೆ ಮಾಡುವುದು ಮತ್ತು ಧರ್ಮರಕ್ಷಣೆ ಮಾಡುವುದು ಧರ್ಮವಾಗಿರಬೇಕು, ಪವಿತ್ರ ಕರ್ತವ್ಯವಾಗಿರಬೇಕು. ಹಾಗೆ ನಡೆಯುವುದ ರಿಂದ ಮನುಷ್ಯನ ಬಾಳು ಸಾರ್ಥಕವಾಗುತ್ತದೆ ; ಈ ಬಾಳಿನಲ್ಲಿ ಸಂತೃಪ್ತಿ ದೊರಕುತ್ತದೆ.

### ಸಮಾಜದ ಮತ್ತು ಸರ್ಕಾರದ ಧರ್ಮ

ಅಂತೆಯೇ ಮಾನವ ಸಮಾಜಕ್ಕೆ, ಯಾವುದೇ ಪ್ರಜಾಸರ್ಕಾರಕ್ಕೆ ಪ್ರಪಂಚದಲ್ಲಿ, ಒಂದು ರಾಷ್ಟ್ರದಲ್ಲಿ ಪ್ರಜಾಕಲ್ಯಾಣಕ್ಕಾಗಿ ಶ್ರಮಿಸುವುದು, ಜನಜೀವನವನ್ನು ಉತ್ತಮಪಡಿಸುವುದು, ಮಾನವ ದುಃಖವನ್ನು ಕಡಿಮೆ ಮಾಡುವುದು, ನೀಗುವುದು, ದುಷ್ಟರನ್ನು ಶಿಕ್ಷಿಸಿ (ಸೂಕ್ತ ಸಂದರ್ಭಗಳಲ್ಲಿ ಕ್ಷಮಿಸಿ) ಶಿಷ್ಟರನ್ನು ರಕ್ಷಿಸುವುದು ಮತ್ತು ಧರ್ಮರಕ್ಷಣೆ ಮಾಡುವುದು ಪವಿತ್ರ ಕರ್ತವ್ಯವಾಗಬೇಕು ಮತ್ತು ಧರ್ಮವಾಗಬೇಕು.

ಮಾನವ ಪ್ರಪಂಚ ಪಾಪ-ಪುಣ್ಯ, ಒಳ್ಳೆಯದು - ಕೆಟ್ಟದ್ದು, ಪ್ರಾಮಾಣಿಕತೆ-ವಂಚನೆ, ಮಾನವತೆ-ಅಮಾನುಷತೆ, ಕರುಣೆ-ಕ್ರೌರ್ಯ, ಧರ್ಮ-ಅಧರ್ಮ, ನ್ಯಾಯ-ಅನ್ಯಾಯ, ವಿಶ್ವಾಸ-ದ್ರೋಹ, ದಯೇ-ನಿರ್ದಯತೆ, ಉದಾತ್ತತೆ-ಕೃಪಣತೆ, ಕೃತಜ್ಞತೆ, ದೈವತ್ವ- ಪೈಶಾಚಿಕತೆ, ಇವುಗಳ ಮೂಲವಾಗಿದ್ದು ಇವುಗಳ ಬೀಡಾಗಿದ್ದು, ಒಟ್ಟಿನಲ್ಲಿ ಮಾನವ ಪ್ರಪಂಚದಲ್ಲಿ ಒಳ್ಳೆಯದಕ್ಕಿಂತ ಕೆಟ್ಟದ್ದೇ ಅತಿ ಹೆಚ್ಚಾಗಿರುತ್ತದೆಂಬುದನ್ನೂ, ಮಾನವರಲ್ಲಿ ಒಳ್ಳೆಯದಕ್ಕಿಂತ ಕೆಟ್ಟದ್ದೇ ಅತಿ ಹೆಚ್ಚಾಗಿರುತ್ತದೆಂಬುದನ್ನೂ, ಮಾನವರಲ್ಲಿ ಪ್ರತಿಯೊಬ್ಬನ ಒಟ್ಟಿನ ಜೀವನವನ್ನು ನ್ಯಾಯದ ತಕ್ಕಡಿಯಲ್ಲಿ ತೂಗಿದರೆ, ಶಿಷ್ಟರಿಗಿಂತ ದುಷ್ಟರೇ ಅತಿ ಹೆಚ್ಚಾಗಿರುವರೆಂಬುದನ್ನೂ ಅರಿತು, ಪ್ರತಿಯೊಬ್ಬನೂ ತನ್ನ ಬಾಳಿಗೆ, ತನ್ನ ಭವಿಷ್ಯಕ್ಕೆ ಸಂಬಂಧಿಸಿದ ಮಹತ್ವದ ನಿರ್ಣಯಗಳನ್ನು ತೆಗೆದುಕೊಳ್ಳುವಾಗ ಗಂಭೀರವಾಗಿ ಮುಂದಾಲೋಚಿಸಬೇಕು. ಧರ್ಮಭೂಮಿ ಎನಿಸಿದ ಭಾರತದಲ್ಲಿಯೂ, ಇಂದು ತಮ್ಮ ಜೀವನದಲ್ಲಿ ಸತ್ಯ ಮತ್ತು ಧರ್ಮಮಾರ್ಗಗಳನ್ನು ಬಿಡದೆ ಸಾಗುವವರು ಅತಿ ಕಡಿಮೆ ಸಂಖ್ಯೆಯ ಜನರೆಂದು ಹೇಳಬಹುದು.



ಉದಯವಾಣಿ

ಗುರುವಾರ ಮಾರ್ಚ್ 10, 2005

# ಪುನರ್ಮನನ ತರಗತಿ ಸಮಾರೋಪ



ಕೆಂಗೇರಿ ಉಪನಗರ

**ಕೆಂ**ಗೇರಿ ಉಪನಗರದ ಬ್ರಾಹ್ಮಣ ಸಭಾ ಏರ್ಪಡಿಸಿದ್ದ ಎಸ್‌ಎಸ್‌ಎಲ್‌ಸಿ ಪುನರ್ಮನನ ತರಗತಿಗಳ ಸಮಾರೋಪ ಸಮಾರಂಭ ಇತ್ತೀಚೆಗೆ ನಡೆಯಿತು.

ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಉತ್ತರಹಳ್ಳಿ ಶಾಸಕರಾದ ಆರ್. ಅಶೋಕ್ ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ ಡಬ್ಲ್ಯೂ. ಪಿ. ಕೃಷ್ಣ ಅವರು ಪಾಲ್ಗೊಂಡಿದ್ದರು. ಈ ಸಂದರ್ಭದಲ್ಲಿ ಮಾತನಾಡಿದ ಕೃಷ್ಣ ಅವರು, ಬ್ರಾಹ್ಮಣ ಸಭಾವು ಕಳೆದ 12 ವರ್ಷಗಳಿಂದ ಅಕ್ಷರ ದಾಸೋಹ ನಡೆಸುತ್ತಿದೆ. ಸುತ್ತಮುತ್ತಲ ಗ್ರಾಮಾಂತರ ಪ್ರದೇಶಗಳ ಕನ್ನಡ ಮಾಧ್ಯಮ ವಿದ್ಯಾರ್ಥಿಗಳಿಗೆ ಸಂಸ್ಥೆ ನಡೆಸುತ್ತಿರುವ ಕೆಲಸ ಸಹಕಾರಿಯಾಗಿದೆ ಎಂದರು.

ಜ್ಞಾನ ದಾಸೋಹವನ್ನು ನೆರವೇರಿಸುತ್ತಿರುವ ಕಾರ್ಯಕರ್ತರನ್ನು ಅಭಿನಂದಿಸಿದ ಅವರು, ಸಮಾಜದ ಎಲ್ಲಾ ಜನತೆಯ ಅಭಿವೃದ್ಧಿಗೆ ಶಿಕ್ಷಣವೊಂದೇ ಮಾರ್ಗ. ಅದು ವ್ಯಕ್ತಿ ಮತ್ತು ರಾಷ್ಟ್ರ ನಿರ್ಮಾಣದ ಜತೆ ಸ್ವಾವಲಂಬನೆ, ಸಂಸ್ಕಾರ ಹಾಗೂ ಸಂಘಟನೆಗಳೆಂಬ ಮೂಲ ಮಂತ್ರವನ್ನು ವಿದ್ಯಾರ್ಥಿಗಳಲ್ಲಿ ಬಿತ್ತುತ್ತದೆ. ಶಿಕ್ಷಕರು ಶಾಲೆಯಲ್ಲಿ ಶಿಕ್ಷಣವನ್ನು ಮಾತ್ರ ನೀಡಲು ಸಾಧ್ಯ. ಆದರೆ ಸಂಸ್ಕಾರ ನೀಡುವ ಜವಾಬ್ದಾರಿಯನ್ನು ಸಮಾಜ ಮಾತ್ರ ನೀಡಬಲ್ಲದು. ಅಂಥ ಹೊಣೆಯನ್ನು ಬ್ರಾಹ್ಮಣ ಸಭಾ ಹೊತ್ತಿದೆ ಎಂದು ಅವರು ಅಭಿಪ್ರಾಯಪಟ್ಟರು. ವಿದ್ಯಾರ್ಥಿಗಳು ತಮ್ಮ ಪರಿಶ್ರಮದ ಮೂಲಕ ಉತ್ತಮ ಫಲಿತಾಂಶ ನೀಡಿ ಸಮಾಜದ ಸತ್ಪ್ರಜೆಯಾಗಬೇಕು ಎಂದು ಕರೆಯಿತ್ತ ಅವರು, ದೇಶದ ಅಭಿವೃದ್ಧಿಗೆ ಶ್ರಮಿಸಬೇಕು. ಇಂಜಿನಿಯರ್, ವೈದ್ಯರಾಗುವ ಸಂಖ್ಯೆ ಹೆಚ್ಚುತ್ತಿದೆ. ಕೆಲವರಾದರೂ ಉತ್ತಮ ಶಿಕ್ಷಕರಾಗುವ ಕನಸು ಕಾಣಿರಿ ಎಂದು ಸಲಹೆ ನೀಡಿದರು.

ಸಭೆಯ ಅಧ್ಯಕ್ಷತೆ ವಹಿಸಿ ಮಾತನಾಡಿದ ಸಭಾದ ಅಧ್ಯಕ್ಷ ಸಿ. ಎಸ್. ವಿಶ್ವೇಶ್ವರ್ ಅವರು, ಸ್ಥಳೀಯ ವಿದ್ಯಾರ್ಥಿಗಳಿಗೆ ಎದುರಾಗಿರುವ ಶಿಕ್ಷಕರ ಸಮಸ್ಯೆ, ಸೌಲಭ್ಯಗಳ ಕೊರತೆಯನ್ನು ನಿವಾರಿಸುವ ದೃಷ್ಟಿಯಿಂದ ಪುರ್ಮನನ ತರಗತಿಗಳನ್ನು ಏಪಐಡಿಸಲಾಗಿದೆ ಎಂದು ಅಭಿಪ್ರಾಯಪಟ್ಟರು. ಸಭಾದ ಉಪಾಧ್ಯಕ್ಷ ವಿ. ನರಸಿಂಹಮೂರ್ತಿ ಸ್ವಾಗತಿಸಿದರು. ಕಾರ್ಯದರ್ಶಿ ಪಿ. ನಾಗೇಂದ್ರ ರಾವ್ ವಂದಿಸಿದರು.

ಬೆಂಗಳೂರು ವಿಜಯ
ಮಂಗಳವಾರ 8 ಮಾರ್ಚ್ 2005

# ಕಾಲೇಜು ವಾರ್ಷಿಕೋತ್ಸವ

ಬೆಂಗಳೂರು: ಶೇಷಾದ್ರಿಪುರ ಸಂಜೆ ಪದವಿಪೂರ್ವ ಕಾಲೇಜು ವಾರ್ಷಿಕೋತ್ಸವ ಇತ್ತೀಚೆಗೆ ನಡೆಯಿತು.

ಕಾಲೇಜು ವಾರ್ಷಿಕೋತ್ಸವವನ್ನು ಸರಳವಾಗಿ ಆಚರಿಸಿ ಆ ಹಣವನ್ನು ಸುನಾಮಿ ಸಂತ್ರಸ್ತರಿಗೆ ನೀಡಿದ ವಿದ್ಯಾರ್ಥಿಗಳು ಹಾಗೂ ಉಪನ್ಯಾಸಕರನ್ನು ಶಿಕ್ಷಣದತ್ತಿಯ ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಅಭಿನಂದಿಸಿದರು.

ಆರ್ಥಿಕ ಸಮಸ್ಯೆ ಎದುರಿಸುತ್ತಿರುವ ಮಕ್ಕಳು ಹಗಲು ಹೊತ್ತು ದುಡಿದು ರಾತ್ರಿವೇಳೆ ವಿದ್ಯಾಭ್ಯಾಸ ಮಾಡಿ ಉತ್ತಮ ಸಾಧನೆ ಮಾಡುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಆರಂಭಿಸಿದ ಈ ಸಂಜೆ ಕಾಲೇಜು ಈಗ ನೂರಾರು ವಿದ್ಯಾರ್ಥಿಗಳಿಗೆ ಅನುಕೂಲ ಕಲ್ಪಿಸಿದೆ. ಸರಿಯಾದ ಶಿಕ್ಷಣವಿದ್ದಾಗ ಮಾತ್ರ ಸಮಾಜದಲ್ಲಿ ಉತ್ತಮ ವ್ಯಕ್ತಿಯಾಗಿ ಬದುಕು ನಡೆಸಲು ಸಾಧ್ಯವಾಗುತ್ತದೆ ಎಂದು ಅವರು ಹೇಳಿದರು.

ಶಿಕ್ಷಣದತ್ತಿ ಅಧ್ಯಕ್ಷ ಕೆ.ಎಂ. ನಂಜಪ್ಪ ಅಧ್ಯಕ್ಷತೆ ವಹಿಸಿದ್ದರು. ಸಹ ಕಾರ್ಯದರ್ಶಿ ಎ.ಆರ್. ಶ್ರೀನಿವಾಸಯ್ಯ, ಪ್ರಾಚಾರ್ಯರಾದ ಪ್ರೊ. ಎನ್. ಬೈರೇಗೌಡ ಮತ್ತು ಕಾಲೇಜು ಸಲಹೆಗಾರ ಗೋಪಾಲ್ ಹಾಜರಿದ್ದರು.

# ಉದಯವಾಣಿ

## ಮಾರ್ಚ್ 7, 2005




ಇತ್ತೀಚೆಗೆ ನಗರದ ಶೇಷಾದ್ರಿಪುರಂ ಸಂಜೆ ಪದವಿಪೂರ್ವ ಕಾಲೇಜಿನ ವಾರ್ಷಿಕೋತ್ಸವದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಕಾರ್ಯದರ್ಶಿ ವೂಡೆ ಪಿ. ಕೃಷ್ಣ, ಶಿಕ್ಷಣ ದತ್ತಿ ಅಧ್ಯಕ್ಷ ಕೆ. ಎಂ. ನಂಜಪ್ಪ, ಸಹಕಾರ್ಯದರ್ಶಿ ಪಿ. ಆರ್. ಶ್ರೀನಿವಾಸಯ್ಯ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಶೇಷಾದ್ರಿಪುರಂ ಶಿಕ್ಷಣ ದತ್ತಿ ವತಿಯಿಂದ ಸುನಾಮಿ ಸಂತ್ರಸ್ತರ ಪರಿಹಾರ ನಿಧಿಗಾಗಿ ೬ ಲಕ್ಷ ರೂ.ಗಳನ್ನು ರಾಜ್ಯಪಾಲರಾದ ಟಿ.ಎನ್.ಚತುರ್ವೇದಿ ಅವರಿಗೆ ಸಂಸ್ಥೆಯ ಅಧ್ಯಕ್ಷ ಕೆ.ಎಂ.ನಂಜಪ್ಪ ಅವರು ನೀಡಿದರು. ರೆಡ್‌ಕ್ರಾಸ್ ಉಪಾಧ್ಯಕ್ಷ ಡಾ||ಎಸ್.ಚಂದ್ರಶೇಖರ್ ಶೆಟ್ಟಿ, ಸಂಸ್ಥೆಯ ಕಾರ್ಯದರ್ಶಿ ಡಬ್ಲ್ಯೂ.ಪಿ.ಕೃಷ್ಣ, ರಕ್ತನಿಧಿ ಅಧ್ಯಕ್ಷ ರಾಜು ಚಂದ್ರಶೇಖರ್ ಇತರರು ಈ ಸಂದರ್ಭದಲ್ಲಿ ಹಾಜರಿದ್ದರು.

ಸಂಜೆವಾಣಿ

ಬೆಂಗಳೂರು ಶನಿವಾರ 5 ಮಾರ್ಚ್ 2005




ಶೇಷಾದ್ರಿಪುರಂ ಶಿಕ್ಷಣ ದತ್ತಿ ಸುನಾಮಿ ಸಂತ್ರಸ್ತರ ಪರಿಹಾರ ನಿಧಿಗೆ 6 ಲಕ್ಷ ರೂ. ಕೊಡುಗೆಯನ್ನು ರಾಜ್ಯಪಾಲ ಟಿ.ಎನ್. ಚತುರ್ವೇದಿಯವರಿಗೆ ಭಾರತೀಯ ರೆಡ್ ಕ್ರಾಸ್ ಮುಖಾಂತರ ನೀಡಿದರು. ಚಿತ್ರದಲ್ಲಿ ಎಡದಿಂದ ಸರೋಜಮ್ಮನಂಜಪ್ಪ, ರೆಡ್ ಕ್ರಾಸ್ ಉಪಾಧ್ಯಕ್ಷ ಡಾ. ಎಸ್. ಚಂದ್ರಶೇಖರ್‌ಶೆಟ್ಟಿ, ಡಬ್ಲ್ಯೂ ಪಿ. ಕೃಷ್ಣ, ಮಾಜಿ ಮಾಹಪೌರ ಕೆ.ಎಂ. ನಂಜಪ್ಪ, ಆರ್. ಕೃಷ್ಣ, ರಕ್ತನಿಧಿ ಆಧ್ಯಕ್ಷ ರಾಜು ಚಂದ್ರಶೇಖರ್ ಹಾಗೂ ಇತರರು ಉಪಸ್ಥಿತರಿದ್ದರು.

# ಎಂಸಿಎ ಪ್ರವೇಶ: ಖಾಸಗಿ ಪರೀಕ್ಷೆ ಜೂ. 5ಕ್ಕೆ

ಬೆಂಗಳೂರು, ಮಾ. 4- ರಾಜ್ಯದ ಎಂಬಿಎ ಹಾಗೂ ಎಂಸಿಎ ಸ್ನಾತಕೋತ್ತರ ಕೋರ್ಸ್‌ಗಳಿಗೆ ಪ್ರವೇಶ ಪರೀಕ್ಷೆ ನಡೆಸುವ ಬಗ್ಗೆ ಸರಕಾರ ತಲೆ ಕೆಡಿಸಿ ಕೊಂಡಿಲ್ಲದಿದ್ದರೂ ರಾಜ್ಯ ಖಾಸಗಿ ಸ್ನಾತ ಕೋತ್ತರ ಕಾಲೇಜುಗಳ ಸಂಘ (ಕೆಪಿಪಿಸಿಎ) ತನ್ನ ಪಾಲಿನ ಸೀಟುಗಳಿಗೆ ಜೂ. 5 ರಂದು ಪ್ರವೇಶ ಪರೀಕ್ಷೆ ನಡೆಸಲು ನಿರ್ಧರಿಸಿದೆ.

ಕೆಪಿಪಿಸಿಎ ನಡೆಸುವ ಪರೀಕ್ಷೆಗೆ 'ಕೆ-ಮ್ಯಾಟ್' ಎಂದು ಹೆಸರಿಸಲಾಗಿದೆ. ಪರ್ಯಾಯ ಸಿಇಟಿಯಾಗಿ ಎಂಬಿಎ, ಎಂಸಿಎ ಕೋರ್ಸ್‌ಗಳಿಗೆ ಆಡಳಿತ ಮಂಡಳಿ ಕೋಟಾ ಸೀಟು ಹಂಚಲು ಈ ಪ್ರವೇಶ ಪರೀಕ್ಷೆ ನಡೆಸಲಾಗುತ್ತಿದೆ. ಆದರೆ ಸರಕಾರ ತನ್ನ ಪಾಲಿನ ಸೀಟುಗಳನ್ನು ತುಂಬಲು ಕೈಗೊಳ್ಳಬೇಕಾದ ಪ್ರವೇಶ ಪರೀಕ್ಷೆ ಕುರಿತು ಸುಪ್ರೀಂ ಕೋರ್ಟ್ ತೀರ್ಪನ್ನೇ ನೆಚ್ಚಿಕೊಂಡಿದೆ.

ಗುರುವಾರ ನಡೆದ ಸಂಘದ ಕಾರ್ಯಕಾರಿ ಸಭೆಯಲ್ಲಿ ಈ ಕುರಿತು ನಿರ್ಧರಿಸಲಾಯಿತು ಎಂದು ಕೆಪಿಸಿಸಿಎ ಕಾರ್ಯದರ್ಶಿ ಡಬ್ಲ್ಯು. ಪಿ. ಕೃಷ್ಣ ತಿಳಿಸಿದ್ದಾರೆ.

ಸುಪ್ರೀಂ ಕೋರ್ಟ್ ತೀರ್ಪಿನಂತೆ ಕಳೆದ ವರ್ಷವೂ ಕೆಪಿಸಿಸಿಎ ಪರೀಕ್ಷೆ ಸಂಘಟಿಸಿತ್ತು. 'ಆರು ವಿಭಾಗಳಿದ್ದು ಎಂಬಿಎ ವಿದ್ಯಾರ್ಥಿಗಳು ಐದು ವಿಭಾಗಗಳಲ್ಲಿ ಪರೀಕ್ಷೆ ಬರೆಯಬಹುದು. ಎಂಸಿಎ ಅಭ್ಯರ್ಥಿಗಳು ಆರನೇ ವಿಭಾಗವನ್ನು ಆಯ್ಕೆ ಮಾಡಿಕೊಳ್ಳಬೇಕು. ಆದರೆ ಎಂಬಿಎ ಹಾಗೂ ಎಂಸಿಎ ಗಳಿಗೆ ಪ್ರತ್ಯೇಕ ಮೆರಿಟ್ ಸೀಟುಗಳ ಪಟ್ಟಿಯನ್ನು ಪ್ರಕಟಿಸಲಾಗುವುದು' ಎಂದು ಕೃಷ್ಣ ತಿಳಿಸಿದರು. ರಾಜ್ಯದ 60 ಎಂಬಿಎ ಕಾಲೇಜುಗಳಲ್ಲಿರುವ 2, 600 ಸೀಟುಗಳಲ್ಲಿ 2, 200 ಸೀಟುಗಳು ಖಾಸಗಿ ಕಾಲೇಜುಗಳಿಗೆ ಸೇರಿವೆ. ಕಳೆದ ವರ್ಷ ಶೇ. 50 : 50 ರ ಅನುಪಾತದಂತೆ ಸರಕಾರ ಹಾಗೂ ಖಾಸಗಿ ಕಾಲೇಜುಗಳು ಹಂಚಿಕೊಂಡಿದ್ದವು.

ಆದರೂ ಸೀಟು ಹಂಚಿಕೆ ಸೂತ್ರವನ್ನು ಮಾತ್ರ ಮತ್ತೆ ಸುಪ್ರೀಂ ಕೋರ್ಟ್‌ನ ಏಳು ಸದಸ್ಯರ ಪೀಠವೇ ಸಿದ್ಧಪಡಿಸಬೇಕಿದೆ. ಕೋರ್ಟ್ ತೀರ್ಪನ್ನು ಅನುಸರಿಸಿಯೇ ಸೀಟು ಹಂಚಿಕೆ ಬಗ್ಗೆ ನಿರ್ಧಾರವಾಗಲಿದೆ. ಸರಕಾರದ ಸೀಟುಗಳಿಗೆ ಪರೀಕ್ಷೆ ಸಂಘಟಿಸುವ ಹೊಣೆ ಯನ್ನು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯಕ್ಕೆ ವಹಿಸಲಾಗಿದೆ. ಈ ಸಂಬಂಧ ಪ್ರತಿಕ್ರಿಯಿಸಿರುವ ಕುಲಪತಿ ಡಾ ಕೆ. ಬಲವೀರರೆಡ್ಡಿ 'ಎಂಬಿಎ, ಎಂಸಿಎ ಕೋರ್ಸ್‌ಗಳ ಪ್ರವೇಶ ಪರೀಕ್ಷೆ ಕುರಿತು ಉನ್ನತ ಶಿಕ್ಷಣ ಸಚಿವಾಲಯದಿಂದ ಯಾವುದೇ ಸೂಚನೆ ನಮಗೆ ಬಂದಿಲ್ಲ. ಜತೆಗೆ ಪರೀಕ್ಷೆ ಸಂಘಟಿಸುವ ಹೊಣೆ ನಮಗೇ ಸಿಗುತ್ತದೋ ಅಥವಾ ಸರದಿಯ ಮೇಲೆ ಬೇರೆ ವಿಶ್ವವಿದ್ಯಾಲಯಗಳಿಗೆ ವರ್ಗಾಯಿಸುತ್ತದೋ ಕಾದು ನೋಡಬೇಕು' ಎಂದರು.

**ಸಿಇಟಿ ಮಾಹಿತಿ ಪತ್ರ:** 2005 ರ ಸಿಇಟಿ ಪರೀಕ್ಷೆ ಕುರಿತಂತೆ ಸಿಇಟಿ ಘಟಕ ವೆಬ್‌ಸೈಟ್‌ನಲ್ಲಿ ಮಾಹಿತಿ ಪತ್ರ (ಬ್ರೋಚರ್) ಪ್ರಕಟಿಸಿದೆ. ಅದರಲ್ಲಿ ಮೇ 3, 4, 5 ಹಾಗೂ 6 ರಂದು ಪರೀಕ್ಷೆ ನಡೆಯಲಿದೆ. ಮೇ 14 ರಂದು ಸರಿ ಉತ್ತರಗಳನ್ನು ಪ್ರಕಟಿಸಲಾಗುವುದು. ಇದಕ್ಕೆ ಸಂಬಂಧಿಸಿ ಆಕ್ಷೇಪಣೆಗಳನ್ನು ಮೇ. 18 ರೊಳಗೆ ಸಲ್ಲಿಸಬಹುದು.

ಜೂ.1 ರಂದು ಸಿಇಟಿ ಪರೀಕ್ಷಾ ಫಲಿತಾಂಶ ಪ್ರಕಟಿಸಲಾಗುವುದು. ತಡೆಹಿಡಿಯಲಾದ ಫಲಿತಾಂಶ ಕುರಿತಂತೆ ಜೂ. 8 ರಂದು ಮನವಿ ಸಲ್ಲಿಸಬಹುದಾಗಿದ್ದು, ಜೂ. 10 ರಂದು ಆ ಫಲಿತಾಂಶವೂ ಪ್ರಕಟವಾಗಲಿದೆ. ಜೂ. 14 ರಿಂದ ಕೌನ್ಸೆಲಿಂಗ್ ಆರಂಭವಾಗಲಿದೆ.

ಕರುನಾಡ ಸಂಜೆ

2-3-2005



ಶೇಷಾದ್ರಿಪುರಂ ಶಿಕ್ಷಣ ದತ್ತಿ ಪತಿಯಿಂದ ಸುನಾಮಿ ಸಂತ್ರಸ್ತರ ಪರಿಹಾರ ನಿಧಿಗೆ ನೀಡಲಾದ 6ಲಕ್ಷ ರೂ.ಗಳ ಚೆಕ್ ಅನ್ನು ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಅಧ್ಯಕ್ಷರು ರಾಜ್ಯಪಾಲ ಟಿ.ಎನ್.ಚತುರ್ವೇದಿ ಅವರಿಗೆ ನೀಡಿದರು. ಈ ಸಂದರ್ಭದಲ್ಲಿ ದತ್ತಿ ಅಧ್ಯಕ್ಷ ಕೆ.ಎನ್.ನಂಜಪ್ಪ, ಕಾರ್ಯದರ್ಶಿ ಡಬ್ಲ್ಯು.ಪಿ.ಕೃಷ್ಣ, ರಕ್ತನಿಧಿ ಅಧ್ಯಕ್ಷ ರಾಜು ಚಂದ್ರಶೇಖರ್ ಮತ್ತಿತರರು ಉಪಸ್ಥಿತರಿದ್ದರು.

ಪುಟ 11 ಪ್ರಜಾವಾಣಿ, ಸೋಮವಾರ 14ನೇ ಫೆಬ್ರುವರಿ 2005



ಬೆಂಗಳೂರಿನಲ್ಲಿ ಇತ್ತೀಚೆಗೆ ಆದರ್ಶ ಕಾಲೇಜ್ ಆಶ್ರಯದಲ್ಲಿ ನಡೆದ ಅಂತರ ಕಾಲೇಜ್ ಟೇಬಲ್ ಟೆನಿಸ್ ಟೂರ್ನಿಯಲ್ಲಿ ಪ್ರಶಸ್ತಿ ಗೆದ್ದ ಶೇಷಾದ್ರಿಪುರ ಕಾಲೇಜ್ ತಂಡ. (ಎಡದಿಂದ ಬಲಕ್ಕೆ) ನಿಂತವರು: ಕಿಶೋರ್, ನವೀದ್, ಕುಶಾಲ್, ರಾಘವೇಂದ್ರ; ಕುಳಿತವರು: ಡಾ.ಆರ್.ಧನಪಾಲ್ (ದೈಹಿಕ ಶಿಕ್ಷಣ ನಿರ್ದೇಶಕರು), ಡಾ.ಸಿ.ಎಲ್.ಎನ್.ಪ್ರಕಾಶ್ (ಪ್ರಾಂಶುಪಾಲರು), ವೂಡೇ ಪಿ.ಕೃಷ್ಣ (ಕಾರ್ಯದರ್ಶಿ), ಅವಿನಾಶ (ನಾಯಕ) ಹಾಗೂ ಪ್ರೊ. ಎಚ್.ಎನ್.ಎಂ.ಅರಸ್ (ಕೋಚ್).

# ಶೇಷಾದ್ರಿಪುರಂ ಕಾಲೇಜಿಗೆ ನ್ಯಾಕ್ ಮಾನ್ಯತೆ

ಶೇಷಾದ್ರಿಪುರಂ

ಶೇಷಾದ್ರಿಪುರಂ ಪದವಿ ಕಾಲೇಜಿಗೆ 'ನ್ಯಾಕ್'ನ ಬಿ 2 ಪ್ಲಸ್ ಶ್ರೇಣಿ ದೊರೆತ ಸಂದರ್ಭದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿ ಕಾಲೇಜಿನ ಪ್ರಾಂಶುಪಾಲ, ಸಿಬ್ಬಂದಿ ವರ್ಗ ಹಾಗೂ ವಿದ್ಯಾರ್ಥಿಗಳ ಸಾಧನೆ ಗುರುತಿಸಲು 'ಅಭಿನಂದನಾ' ಕಾರ್ಯಕ್ರಮವನ್ನು ಇತ್ತೀಚೆಗೆ ಹಮ್ಮಿಕೊಂಡಿತ್ತು.

ಕಾಲೇಜಿನ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವವರನ್ನು ಅಭಿನಂದಿಸಿ ಮಾತನಾಡಿದ ಮೈಸೂರು ರಾಮಕೃಷ್ಣ ಆಶ್ರಮದ ಸ್ವಾಮೀಜಿ ಶ್ರೀ ಮುಕ್ತಿದಾನಂದಜೀ ಮಹಾರಾಜ್ ಇಂದು ಗುಣಮಟ್ಟದ ಶಿಕ್ಷಣದ ಅಗತ್ಯ ಹಿಂದೆಂದಿಗಿಂತಲೂ ಹೆಚ್ಚು ಇದೆ ಎಂದು ಅಭಿಪ್ರಾಯ ಪಟ್ಟರು.

ದೇಶದ ಸಮಗ್ರ ಬೆಳವಣಿಗೆಯ ಕೊರತೆಗೆ ಕಾರಣ ಇಲ್ಲಿನ ಕೆಲಸದ ಸಂಸ್ಕೃತಿಯಲ್ಲಿರುವ ಲೋಪ ದೋಷಗಳು ಎಂದ ಸ್ವಾಮೀಜಿ, ವಿದ್ಯಾರ್ಥಿಗಳಿಗೆ ಶಿಕ್ಷಣದ ಜೊತೆ ಸಾಮಾಜಿಕ ಕಾಳಜಿಯನ್ನೂ ಬೆಳೆಸಬೇಕು ಎಂದರು.

ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಶ್ರೀ ಕೆ.ಎಂ. ನಂಜಪ್ಪ, ಕಾರ್ಯದರ್ಶಿ ಶ್ರೀ ವೂಡೇ ಪಿ. ಕೃಷ್ಣ, ಪ್ರಾಂಶುಪಾಲ ಡಾ। ಸಿ.ಎಲ್.ಎನ್. ಪ್ರಕಾಶ್ ಅವರನ್ನು ಕಾಲೇಜಿನ ಎಲ್ಲರ ಪರವಾಗಿ ಅಭಿನಂದಿಸಿದರು.

ಸೂರ್ಯೋದಯ ಗುರುವಾರ, 10 ಫೆಬ್ರುವರಿ 2005



ನಗರದ ಶೇಷಾದ್ರಿಪುರಂ ಶಿಕ್ಷಣ ಸಮೂಹದ ಅಧ್ಯಕ್ಷ ಕೆ.ಎಂ. ನಂಜುಂಡಪ್ಪನವರ 94ನೇ ಹುಟ್ಟು ಹಬ್ಬದ ಅಂಗವಾಗಿ ಕಾಲೇಜಿನ ಎನ್.ಎಸ್.ಎಸ್. ಹಾಗೂ ಎನ್.ಸಿ.ಸಿ. ವಿಭಾಗ ಆಯೋಜಿಸಿದ್ದ ರಕ್ತ ದಾನ ಶಿಬಿರದಲ್ಲಿ ವಿದ್ಯಾರ್ಥಿಗಳು ರಕ್ತದಾನ ಮಾಡಿದರು.



ರಂಗಾಭರಣ ಕಲಾಶಾಲೆಯ ಸಾಂಸ್ಕೃತಿಕ ಉತ್ಸವದಲ್ಲಿ ರಂಗಕರ್ಮಿ ಕಪ್ಪಣ್ಣ ಮತ್ತು ಶಿಕ್ಷಣ ತಜ್ಞ ಡಬ್ಲ್ಯು. ಪಿ. ಕೃಷ್ಣ ಅವರನ್ನು ಸನ್ಮಾನಿಸಲಾಯಿತು. ಮಾಜಿ ಸಂಸದ ಸಿ. ನಾರಾಯಣಸ್ವಾಮಿ, ರಂಗಾಭರಣ ಸಂಸ್ಥೆಯ ಸಂಸ್ಥಾಪಕ ಎಂ.ಎಸ್. ಗುಣಶೀಲನ್, ನಗರಸಭೆಯ ಮಾಜಿ ಸದಸ್ಯ ಎಂ. ನಾಗರಾಜ್ ಅವರು ಚಿತ್ರದಲ್ಲಿ ಇದ್ದಾರೆ.

# ವಾರ್ಷಿಕೋತ್ಸವ ರದ್ದುಪಡಿಸಿ ಸುನಾಮಿ ನಿಧಿಗೆ ಪರಿಹಾರ

ಕನ್ನಡಪ್ರಭ ವಾರ್ತೆ, ಬೆಂಗಳೂರು,ಜ.21

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಂಗ ಸಂಸ್ಥೆಗಳು ಈ ಶೈಕ್ಷಣಿಕ ವರ್ಷದ ಶಾಲಾ ಕಾಲೇಜುಗಳ ವಾರ್ಷಿಕೋತ್ಸವವನ್ನು ರದ್ದುಪಡಿಸಿ ಈ ಉದ್ದೇಶಕ್ಕಾಗಿ ಕಾಯ್ದಿರಿಸಿದ್ದ ಎಂಟು ಲಕ್ಷ ರುಪಾಯಿಯನ್ನು ಸುನಾಮಿ ಸಂತ್ರಸ್ತರಿಗೆ ನೀಡಲಾಗಿದೆ.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಗೆ ಆರು ಲಕ್ಷ ರುಪಾಯಿ. ರಾಷ್ಟ್ರೀಯ ಸಂಚಲಿತ ಸಂತ್ರಸ್ತ ಪರಿಹಾರ ನಿಧಿಗೆ ಒಂದು ಲಕ್ಷ ರುಪಾಯಿ ಹಾಗೂ ರಾಜೀವಗಾಂಧಿ ರಾಷ್ಟ್ರೀಯ ಪರಿಹಾರ ಮತ್ತು ಕ್ಷೇಮಾಭಿವೃದ್ಧಿ ದತ್ತಿಗೆ ಒಂದು ಲಕ್ಷ ರುಪಾಯಿ ನೀಡಿರುವುದಾಗಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ ಹೇಳಿಕೆಯಲ್ಲಿ ತಿಳಿಸಿದ್ದಾರೆ.

MAG(5)PRBDECL 105/85 CPMG/KA-BGS/350/2003-2005
ರವಾನೆ ದಿನಾಂಕ ಪ್ರತಿ ಮಾಹೆ ೨೨, ಅವಿನ್ಯೂ ರಸ್ತೆ ಅಂಚೆ ಕಛೇರಿ







ಸಂಪಾದಕರು, ಪ್ರಕಾಶಕರು : ಗೋವಿಂದಹಳ್ಳಿ ದೇವೇಗೌಡ | ಜನವರಿ ೨೦೦೫ | ಬೆಲೆ : ೩.೦೦

KANNADA KANMANI MONTHLY ಸಂಪುಟ-೧೯ ಸಂಚಿಕೆ-೧೧, ದೂರವಾಣಿ: ೨೯೧೯೪೬೨, ಮೊಬೈಲ್: ೯೩೪೨೮೧೩೨೯೪, ಫ್ಯಾಕ್ಸ್: ೫೧೨೪೭೧೨೭

ಕ್ಯಾಲೆಂಡರ್ ಹೊಸ ವರ್ಷದ ಶುಭಾಶಯಗಳು - 2005

# ಜನ ಸಂಘಟನೆ ಹೋರಾಟವಾದರೆ ಕನ್ನಡದ ಕೆಲಸವಾದೀತು

-ಹೆಚ್.ಎಸ್. ದೊರೆಸ್ವಾಮಿ



ಅಖಿಲ ಕರ್ನಾಟಕ ಕನ್ನಡ ಕಣ್ಮಣಿ ಡಾ|| ರಾಜ್ ಸಾಂಸ್ಕೃತಿಕ ಸಂಸ್ಥೆಯ ವತಿಯಿಂದ ಕನ್ನಡ ರಾಜ್ಯೋತ್ಸವ ಹಾಗೂ ವಿಶ್ವಕವಿ ಕುವೆಂಪು ಜನ್ಮ ಶತಮಾನೋತ್ಸವ ಸಮಾರಂಭದಲ್ಲಿ ಹಿರಿಯ ಸ್ವಾತಂತ್ರ್ಯ ಹೋರಾಟಗಾರರು ಶ್ರೀ ಹೆಚ್. ದೊರೆಸ್ವಾಮಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಬಿ.ಎಂ. ಇದಿನಬ್ಬ, ಶ್ರೀ ರಾಮರೆಡ್ಡಿ, ಶ್ರೀ ಡಬ್ಲ್ಯು. ಸಿ. ಕೃಷ್ಣ, ಡಾ|| ಬಾನಂದೂರು ಕೆಂಪಯ್ಯರವರುಗಳನ್ನು ಸನ್ಮಾನಿಸಲಾಯಿತು. ಚಿತ್ರದಲ್ಲಿ ಶ್ರೀ ಧರಣೇಶ್ ಬಿ.ಎ. ಶ್ರೀ ರೇವಣ್ಣ ಶ್ರೀ ನಾರಾಯಣರಾವ್ ಮಾನೆ, ಶ್ರೀ ಮಂಜೇಗೌಡರು, ಶ್ರೀ ವಾಸು, ಶ್ರೀ ಗೋವಿಂದಹಳ್ಳಿ ದೇವೇಗೌಡರು, ಡಾ. ದೊಡ್ಡರಂಗೇಗೌಡರು, ಶ್ರೀ ರಾಜೇಂದ್ರಕೃಷ್ಣ ಚಿತ್ರದಲ್ಲಿದ್ದಾರೆ.

ಜನ ಸಂಘಟನೆ ಆಗಬೇಕು, ಜನ ಹೋರಾಟ ಮಾಡಬೇಕು, ಚಳುವಳಿ ಮಾಡಬೇಕು ಆಗ ಕನ್ನಡದ ಕೆಲಸ ಆದೀತು ಎಂದು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಹೆಚ್.ಎಸ್.ದೊರೆಸ್ವಾಮಿ ಅವರು ಕರೆ ನೀಡಿದರು.

ಅಖಿಲ ಕರ್ನಾಟಕ ಕನ್ನಡ ಕಣ್ಮಣಿ ಡಾ|| ರಾಜ್ ಸಾಂಸ್ಕೃತಿಕ ಸಂಸ್ಥೆಯು ಹಮ್ಮಿಕೊಂಡಿದ್ದ ಕನ್ನಡ ರಾಜ್ಯೋತ್ಸವ ಹಾಗೂ ವಿಶ್ವಕವಿ ಕುವೆಂಪು ಜನ್ಮ ಶತಮಾನೋತ್ಸವ ಸಮಾರಂಭದಲ್ಲಿ ಕುವೆಂಪುರವರ ಕಲಾಕೃತಿಯನ್ನು ಅನಾವರಣ ಮಾಡಿ, ಸನ್ಮಾನ ಸ್ವೀಕರಿಸಿ ಅವರು ಮಾತನಾಡುತ್ತಿದ್ದರು. ಕರ್ನಾಟಕದಲ್ಲಿ ಹೊರರಾಜ್ಯಗಳಿಂದ ಬರುತ್ತಿರುವ ವಲಸಿಗರಿಂದ ಇಂದು ಕನ್ನಡಿಗರು ನಿರ್ಗತಿಕರಾಗುತ್ತಿದ್ದಾರೆ ಎಂದು ಆತಂಕ ವ್ಯಕ್ತಪಡಿಸಿದ ಅವರು ಸರ್ಕಾರಕ್ಕೆ ನಿರ್ದಿಷ್ಟ ದೃಷ್ಟಿ - ಧೋರಣೆ ಇಲ್ಲವೆಂದು ಖೇದ ವ್ಯಕ್ತಪಡಿಸಿದರು. ಸ್ವಾತಂತ್ರ್ಯ ಸಂಗ್ರಾಮಕ್ಕೆ ಕುವೆಂಪುರವರ ಕೊಡುಗೆ ಅಪಾರ ಅವರ ಕ್ರಾಂತಿಗೀತೆಗಳು, ಪದ್ಯಗಳು ಜನಸಮುದಾಯದಲ್ಲಿ ಸ್ಫೂರ್ತಿ ಹಾಗೂ ಕೆಚ್ಚು ಮೂಡಿಸುತ್ತಿದ್ದವು. ಪ್ರಸ್ತುತ ಕುವೆಂಪುರವರ ಕ್ರಾಂತಿ ಗೀತೆಗಳನ್ನು ಹಾಡುವ ಮೂಲಕ ಗಾಯಕರು ಜನ ಜಾಗೃತಿ ಮಾಡಬೇಕಾದ ತುರ್ತು ಅನಿವಾರ್ಯವಿದೆ ಎಂದು ನುಡಿದರು.

**ಕುವೆಂಪುಗೆ ನೊಬೆಲ್ ಪ್ರಶಸ್ತಿಗೆ ಆಗ್ರಹ :-** ಸಮಾರಂಭದ ಉದ್ಘಾಟನೆಯನ್ನು ನೆರವೇರಿಸಿ ಹಾಗೂ ಡಾ|| ದೊಡ್ಡರಂಗೇಗೌಡರ ಗೀತಸಿರಿ ಕೃತಿಯನ್ನು ಬಿಡುಗಡೆ ಮಾಡಿದ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಶ್ರೀ ಬಿ.ಎಂ. ಇದಿನಬ್ಬ ಅವರು ಮಾತನಾಡುತ್ತಾ ಡಾ|| ದೊಡ್ಡರಂಗೇಗೌಡರು ಜನಪರ ಸಾಹಿತಿಗಳು, ಅವರ ಕೃತಿಗಳು ಗ್ರಾಮೀಣ ಸೊಗಡಿನಿಂದ ಕೂಡಿವೆ ಎಂದ ಅವರು ಕುವೆಂಪು ಜನ್ಮಶತಮಾನೋತ್ಸವ ಸಂದರ್ಭದಲ್ಲಿ ವಿಶ್ವವಿ ಕುವೆಂಪುರವರ ನೊಬೆಲ್ ಪ್ರಶಸ್ತಿ ನೀಡಲು ಆಗ್ರಹಿಸಿದರು.

**ಶಾಸ್ತ್ರೀಯ ಭಾಷೆ ಘೋಷಣೆಗೆ ಒತ್ತಾಯ :-** ಖ್ಯಾತ ಜನಪರ ಕವಿ ದೊಡ್ಡರಂಗೇಗೌಡರು ಮಾತನಾಡುತ್ತಾ 1500 ವರ್ಷಗಳ ಲಿಖಿತ ಸಾಹಿತ್ಯ ಹೊಂದಿರುವ ಕನ್ನಡ ಭಾಷೆಯನ್ನು ಶಾಸ್ತ್ರೀಯ ಭಾಷೆ ಎಂದು ಘೋಷಿಸಲು ಕೇಂದ್ರ ಸರ್ಕಾರಕ್ಕೆ ಒತ್ತಾಯಿಸಿದರು. ಕನ್ನಡಿಗರು ಕೇಂದ್ರ ಸರ್ಕಾರದ ಜಾಣ ಕಿವುಡು ಹಾಗೂ ಜಾಣ ಕುರುಡು ನೀತಿಯನ್ನು ಪ್ರತಿಭಟಿಸಿ ಪತ್ರ ಚಳುವಳಿ ನಡೆಸಲು ಅವರು ಕರೆ ನೀಡಿದರು. ಮುಂದುವರಿಯುತ್ತಾ, ದೇವನಹಳ್ಳಿ ಅಂತರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಕೆಂಪೇಗೌಡ ಅಂತರರಾಷ್ಟ್ರೀಯ

ಪುಟ 2ಕ್ಕೆ ...



ಅಖಿಲ ಕರ್ನಾಟಕ ಕನ್ನಡ ಕಣ್ಮಣಿ ಡಾ|| ರಾಜ್ ಸಾಂಸ್ಕೃತಿಕ ಸಂಸ್ಥೆಯ ವತಿಯಿಂದ ಕನ್ನಡ ರಾಜ್ಯೋತ್ಸವ ಹಾಗೂ ವಿಶ್ವಕವಿ ಕುವೆಂಪು ಜನ್ಮ ಶತಮಾನೋತ್ಸವ ಸಮಾರಂಭದ ಅಂಗವಾಗಿ ಕುವೆಂಪುರವರ ಕಲಾಕೃತಿಯನ್ನು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಶ್ರೀ ಹೆಚ್.ಎಸ್. ದೊರೆಸ್ವಾಮಿ ಅನಾವರಣಗೊಳಿಸಿದರು. ಚಿತ್ರದಲ್ಲಿ ಶ್ರೀ ರಾಜಣ್ಣ ಶ್ರೀ ಬಿ.ಎಂ. ಇದಿನಬ್ಬ, ಡಾ|| ವರದಾ ಶ್ರೀನಿವಾಸ್, ಶ್ರೀ ವಾಸು, ಶ್ರೀ ವೆ. ಶ್ರೀನಿವಾಸ್, ಶ್ರೀ ಗೋವಿಂದಹಳ್ಳಿ ದೇವೇಗೌಡ ಚಿತ್ರದಲ್ಲಿದ್ದಾರೆ.




ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವ ಎನ್. ಚೆಲುವರಾಯಸ್ವಾಮಿರವರಿಗೆ ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ. ಎನ್.ಜಿ. ನಾರಾಯಣರವರು ಸುನಾಮಿ ಸಂತ್ರಸ್ತರಿಗೆ ನೆರವಾಗಲು 18 ಲಕ್ಷದ 40 ಸಾವಿರ ರೂ.ಗಳ ಚೆಕ್ಕನ್ನು ನೀಡಿದರು. ರಾಜು ಚಂದ್ರಶೇಖರ್ ಚಿತ್ರದಲ್ಲಿದ್ದಾರೆ.

(ನಮ್ಮ ಪ್ರತಿನಿಧಿಯಿಂದ)

ಬೆಂಗಳೂರು, ಜ. ೧೩- ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯು ಕರ್ನಾಟಕ ಶಾಖೆ ವತಿಯಿಂದ ಸುನಾಮಿ ಸಂತ್ರಸ್ತರಿಗೆ ಇಂದು 13 ಲಕ್ಷ ರೂ. ಮೌಲ್ಯದ ಪರಿಹಾರ ಸಾಮಗ್ರಿಗಳನ್ನು ಕಳುಹಿಸಲಾಯಿತು.

ಪರಿಹಾರ ಸಾಮಗ್ರಿಗಳನ್ನು ಹೊತ್ತ ಮೂರು ಟ್ರಕ್ಕುಗಳಿಗೆ ಆರೋಗ್ಯ ಖಾತೆ ಸಚಿವ ಚೆಲುವರಾಯಸ್ವಾಮಿರವರು ಹಸಿರು ನಿಶಾನೆ ತೋರಿದರು.

ತಮಿಳುನಾಡಿನ ಸುನಾಮಿ ಸಂತ್ರಸ್ತರಿಗೆ ಕಳಿಸಲಾದ ಈ ಪರಿಹಾರ ಸಾಮಗ್ರಿಗಳಲ್ಲಿ ಅಕ್ಕಿ, ಸಕ್ಕರೆ, ಉಪ್ಪು, ಸಾಂಬಾರು ಪದಾರ್ಥ, ಬ್ಲಾಂಕೆಟ್ಸ್, ಔಷಧಿ, ಸೋಪು ಮತ್ತಿತರ ವಸ್ತುಗಳು ಸೇರಿವೆ.

ಇದೇ ಸಂದರ್ಭದಲ್ಲಿ ಆಸ್ಟ್ರಾಜೆನಿಕ್ ಸಂಸ್ಥೆ, ರೆಡ್‌ಕ್ರಾಸ್ ಸಂಸ್ಥೆ ಕರ್ನಾಟಕ ಶಾಖೆಗೆ ಸುನಾಮಿ ಸಂತ್ರಸ್ತರಿಗಾಗಿ ಕಳುಹಿಸಲು 18.40 ಲಕ್ಷ ರೂ. ಮೌಲ್ಯದ ಚೆಕನ್ನು ಭಾರತೀಯ ರೆಡ್‌ಕ್ರಾಸ್ ಸಂಸ್ಥೆಗೆ ನೀಡಿತು.

ನ್ಯಾಷನಲ್ ಇನ್‌ಸ್ಟ್ರುಮೆಂಟ್ಸ್ ಸಂಸ್ಥೆ ಕೂಡ ಸುನಾಮಿ ಸಂತ್ರಸ್ತರಿಗೆ ನೆರವು ನೀಡಲು ಭಾರತೀಯ ರೆಡ್‌ಕ್ರಾಸ್ ಸಂಸ್ಥೆಗೆ 10 ಲಕ್ಷ ರೂ.ಗಳ ಚೆಕನ್ನು ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕ ಜಯರಾಂ ಪಿಳ್ಳೈ ನೀಡಿದರು.

ಈ ಸಂದರ್ಭದಲ್ಲಿ ಮಾತನಾಡಿದ ಸಚಿವ ಚೆಲುವರಾಯಸ್ವಾಮಿರವರು ಇಂದು ಸುನಾಮಿ ಸಂತ್ರಸ್ತರಿಗಾಗಿ ಕಳುಹಿಸಲಾಗಿರುವ 13 ಲಕ್ಷ ರೂ. ಮೌಲ್ಯದ ಪರಿಹಾರ ಸಾಮಗ್ರಿಗಳು ಸೇರಿವೆ. ಈವರೆಗೆ ಒಟ್ಟು 28.60 ಲಕ್ಷ ರೂ. ಮೌಲ್ಯದ ಪರಿಹಾರ ಸಾಮಗ್ರಿಗಳನ್ನು ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ರಾಜ್ಯ ಶಾಖೆ ತಮಿಳುನಾಡು ಪೋರ್ಟ್‌ಬ್ಲೇರ್, ಕೇರಳ ಮತ್ತು ಆಂಧ್ರಪ್ರದೇಶಗಳ ಸಂತ್ರಸ್ತರಿಗೆ ಕಳುಹಿಸಿಕೊಟ್ಟಿದೆ ಎಂದರು.

ಬೇರೆ ಬೇರೆ ಸಂಸ್ಥೆಗಳಿಂದ ಬರುವ ಹಣ ಹಾಗೂ ಪರಿಹಾರ ಸಾಮಗ್ರಿಗಳನ್ನು ಸಂಗ್ರಹಿಸಿ ಮುಂಬರುವ ದಿನಗಳಲ್ಲಿ ಅವನ್ನು ಕಳುಹಿಸಿಕೊಡಲಾಗುವುದು ಎಂದರು.

ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ.ಎನ್.ಜಿ. ನಾರಾಯಣ, ಖಜಾಂಚಿ ಸಿ.ಎ. ಸರೋಜ ಮತ್ತು ಪದಾಧಿಕಾರಿಗಳಾದ ಡಬ್ಲ್ಯು.ಪಿ. ಕೃಷ್ಣ, ರಾಜುಚಂದ್ರಶೇಖರ್‌ರವರು ಮತ್ತಿತರರು ಇದ್ದರು.

ರಾಜ್ಯಪ್ರಗತಿ

10-1-2005



ರೇಸ್‌ಕೋರ್ಸ್ ರಸ್ತೆಯಲ್ಲಿ ಕಳೆದ ತಿಂಗಳ ಏಳರಂದು ರೆಡ್‌ಕ್ರಾಸ್ ಭವನ ಉದ್ಘಾಟಿಸಲ್ಪಟ್ಟಿತು. ಚಿತ್ರದಲ್ಲಿ (ಕುಳಿತಿರುವವರು) ಆರ್.ಕೃಷ್ಣ, ಡಬ್ಲ್ಯು.ಪಿ.ಕೃಷ್ಣ, ಡಾ|| ಡಿ.ಎಂ.ನಂಜುಂಡಪ್ಪ ರಾಜ್ಯಪಾಲ ಟಿ.ಎನ್.ಚತುರ್ವೇದಿ, ಸಚಿವ ಪಿ.ಜಿ.ಆರ್.ಸಿಂಧ್ಯಾ, ದಾನಿ ಶ್ರೀ ಕಂಠಾರಾಧ್ಯ ಮತ್ತು ಡಾ|| ಎನ್.ಜಿ.ನಾರಾಯಣ ಹಾಗೂ (ನಿಂತಿರುವವರು) ಮಧುರಾ ಅಶೋಕಕುಮಾರ್ ಮತ್ತು ಸರೋಜ ಕೆ.ಎಂ.ನಂಜಪ್ಪ ಮೊದಲಾದವರಿದ್ದಾರೆ.

# ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗೆ ಆಯ್ಕೆ

ಶೇಷಾದ್ರಿಪುರಂ ಶಿಕ್ಷಣ ದತ್ತಿಯ (ಶಿಕ್ಷಣ ಸಂಸ್ಥೆಗಳ ಸಮೂಹದ) ಅಧ್ಯಕ್ಷರಾಗಿ ಮಾಜಿ ಮೇಯರ್ ಕೆ.ಎಂ. ನಂಜಪ್ಪ ಆಯ್ಕೆ ಆಗಿದ್ದಾರೆ. ಇತರ ಪದಾಧಿಕಾರಿಗಳು: ಎನ್.ಆರ್. ಪಂಡಿತಾರಾಧ್ಯ, ಡಬ್ಲ್ಯೂ.ಎಚ್. ಅನಿಲ್‌ಕುಮಾರ್ (ಉಪಾಧ್ಯಕ್ಷರು), ಟಿ.ಎಸ್. ಹೆಂಜಾರಪ್ಪ (ಗೌರವ ಖಜಾಂಚಿ), ಡಬ್ಲ್ಯೂ. ಪಿ. ಕೃಷ್ಣ (ಗೌರವ ಪ್ರಧಾನ ಕಾರ್ಯದರ್ಶಿ), ಎ.ಆರ್. ಶ್ರೀನಿವಾಸಯ್ಯ (ಗೌರವ ಜಂಟಿ ಕಾರ್ಯದರ್ಶಿ), ಆರ್. ಕೃಷ್ಣ (ಗೌರವ ಕಾರ್ಯದಶಿ) ಅವರನ್ನು ಆಯ್ಕೆ ಮಾಡಲಾಯಿತು.

ಉದಯವಾಣಿ ಮಂಗಳವಾರ 4 ಜನವರಿ 2005

## ಪದಾಧಿಕಾರಿಗಳು

ಮಾಜಿ ಮೇಯರ್ ಕೆ.ಎಂ. ನಂಜಪ್ಪ ಹಾಗೂ ಎನ್.ಆರ್. ಪಂಡಿತಾರಾಧ್ಯ ಮತ್ತು ಡಬ್ಲ್ಯೂ. ಎಚ್. ಅನಿಲ್‌ಕುಮಾರ್ ಅವರು ಕ್ರಮವಾಗಿ ಶೇಷಾದ್ರಿಪುರ ಶಿಕ್ಷಣ ದತ್ತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರುಗಳಾಗಿ ಆಯ್ಕೆಯಾಗಿದ್ದಾರೆ. ಟಿ.ಎಸ್. ಹೆಂಜಾರಪ್ಪ ಖಜಾಂಚಿ, ಡಬ್ಲ್ಯೂ. ಪಿ. ಕೃಷ್ಣ ಪ್ರಧಾನ ಕಾರ್ಯದರ್ಶಿ, ಎ.ಆರ್. ಶ್ರೀನಿವಾಸಯ್ಯ ಜಂಟಿ ಕಾರ್ಯದರ್ಶಿ ಹಾಗೂ ಆರ್. ಕೃಷ್ಣ ಅವರು ಸಹ ಕಾರ್ಯದರ್ಶಿಗಳಾಗಿ ಆಯ್ಕೆಯಾಗಿದ್ದಾರೆ ಎಂದು ಶಿಕ್ಷಣ ದತ್ತಿ ಪ್ರಕಟಣೆ ತಿಳಿಸಿದೆ.

ಕನ್ನಡಪ್ರಭ ಮಂಗಳವಾರ, 4 ಜನವರಿ 2005

**ಶೇಷಾದ್ರಿಪುರ ಶಿಕ್ಷಣ ಟ್ರಸ್ಟ್ ಅಧ್ಯಕ್ಷರಾಗಿ ಕೆ.ಎಂ.ನಂಜಪ್ಪ ಆಯ್ಕೆ:** ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆಯ ಅಧ್ಯಕ್ಷರಾಗಿ ಮಾಜಿ ಮೇಯರ್ ಕೆ.ಎಂ. ನಂಜಪ್ಪ ಅವರು ಸರ್ವಾನುಮತದಿಂದ ಆಯ್ಕೆಯಾಗಿದ್ದಾರೆ. ಗೌರವ ಪ್ರಧಾನ ಕಾರ್ಯದರ್ಶಿಯಾಗಿ ಡಬ್ಲ್ಯೂ.ಪಿ. ಕೃಷ್ಣ, ಉಪಾಧ್ಯಕ್ಷರಾಗಿ ಎನ್.ಆರ್. ಪಂಡಿತಾರಾಧ್ಯ ಹಾಗೂ ಡಬ್ಲ್ಯೂ.ಎಚ್. ಅನಿಲ್ ಕುಮಾರ್, ಗೌರವ ಖಜಾಂಚಿಯಾಗಿ ಟಿ.ಎಸ್. ಹೆಂಜಾರಪ್ಪ, ಗೌರವ ಜಂಟಿ ಕಾರ್ಯದರ್ಶಿಯಾಗಿ ಎ.ಆರ್. ಶ್ರೀನಿವಾಸಯ್ಯ, ಗೌರವ ಸಹಾಯಕ ಕಾರ್ಯದರ್ಶಿಯಾಗಿ ಆರ್ ಕೃಷ್ಣ ಆಯ್ಕೆಯಾಗಿದ್ದಾರೆ.

ಸಂಜೆವಾಣಿ

ಸೋಮವಾರ 3 ಜನವರಿ 2005

# ಶೇಷಾದ್ರಿಪುರ ಶಿಕ್ಷಣದತ್ತಿ ನೂತನ ಪದಾಧಿಕಾರಿಗಳು

ಬೆಂಗಳೂರು, ಜ. ೩. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪದಾಧಿಕಾರಿಗಳಾಗಿ ಈ ಕೆಳಕಂಡವರು ಅವಿರೋಧವಾಗಿ ಆಯ್ಕೆಯಾಗಿದ್ದಾರೆ.

ಅಧ್ಯಕ್ಷರಾಗಿ ಕೆ.ಎಂ. ನಂಜಪ್ಪ, ಉಪಾಧ್ಯಕ್ಷರಾಗಿ ಎನ್.ಆರ್. ಪಂಡಿತಾರಾಧ್ಯ, ಡಬ್ಲ್ಯು ಎಚ್. ಅನಿಲ್‌ಕುಮಾರ್, ಗೌರವ ಕಜಾಂಚಿಯಾಗಿ ಟಿ.ಎಸ್. ಹೆಂಜಾರಪ್ಪ, ಗೌರವ ಕಾರ್ಯದರ್ಶಿಯಾಗಿ ವೂಡೇ ಪಿ. ಕೃಷ್ಣ, ಗೌರವ ಜಂಟಿ ಕಾರ್ಯದರ್ಶಿಯಾಗಿ ಎ.ಆರ್. ಶ್ರೀನಿವಾಸಯ್ಯ ಮತ್ತು ಗೌರವ ಸಹಾಯಕ ಕಾರ್ಯದರ್ಶಿಯಾಗಿ ಎ. ಕೃಷ್ಣರವರು ಅವಿರೋಧವಾಗಿ ಆಯ್ಕೆಯಾಗಿದ್ದಾರೆ.

ಸಂಯುಕ್ತ ಕರ್ನಾಟಕ

2-1-2005

# ಶೇಷಾದ್ರಿಪುರಂ ಶಿಕ್ಷಣ ದತ್ತಿ: ತಾರಕಕ್ಕೇರಿದ ಸದಸ್ಯತ್ವ ವಿವಾದ

ಬೆಂಗಳೂರು, ಜ. 1- ನಗರದ ಪ್ರತಿಷ್ಠಿತ ಶೇಷಾದ್ರಿಪುರಂ ಶಿಕ್ಷಣ ದತ್ತಿಯು ಕಳೆದ ವರ್ಷ ತೆಗೆದುಕೊಂಡಿರುವ 345 ಜನರ ಆಜೀವ ಸದಸ್ಯತ್ವ ವಿವಾದ ಈಗ ತಾರಕಕ್ಕೇರಿದೆ.

ನಾಳೆ (ಡಿ. 2) ನಡೆಯಲಿರುವ ಟ್ರಸ್ಟಿಗಳ ಮಂಡಳಿ ಚುನಾವಣೆಯಲ್ಲಿ 345 ಜನರಿಗೆ ಮತದಾನ ಹಕ್ಕು ಇಲ್ಲ ಎಂದು ಜಿಲ್ಲಾ ನೋಂದಣಾಧಿಕಾರಿಯವರು ಸ್ಪಷ್ಟವಾಗಿ ತಿಳಿಸಿದ್ದರೂ, ಅವರ ಸೂಚನೆ ಮೀರಿ ಕಾರ್ಯ ನಿರ್ವಹಿಸಲಾಗುತ್ತಿದೆ ಎಂದು ಒಂದು ಗುಂಪು ಆಪಾದಿಸಿದೆ. ಇದಕ್ಕೆ ಪ್ರತಿಯಾಗಿ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಡಬ್ಲ್ಯು.ಪಿ. ಕೃಷ್ಣ ಅವರು ಹೊಸದಾಗಿ ತೆಗೆದುಕೊಂಡಿರುವ ಎಲ್ಲ 345 ಸದಸ್ಯರಿಗೆ ಮತದಾನದ ಹಕ್ಕು ಇದೆ.

ದತ್ತಿಯ ಟ್ರಸ್ಟಿಗಳಲ್ಲಿ ಒಬ್ಬರಾದ ಸುರೇಶ್ ಹಾಗೂ ಆಜೀವ ಸದಸ್ಯರಾದ ಬೈರಣ್ಣ, ಡಾ. ಬೈರಣ್ಣ, ಡಾ. ಮನೋಹರ, ಟಿ.ಆರ್. ಕಾಂತರಾಜ್ ಮುಂತಾದವರು ಇಂದು ಪತ್ರಿಕಾಗೋಷ್ಠಿಯಲ್ಲಿ ಮಾತನಾಡಿ, ಆಡಳಿತ ಮಂಡಳಿಯ ಗಮನಕ್ಕೆ ತಾರದೆ, ಮಂಡಳಿಯ ಸಭೆಯ ನಿರ್ಣಯಗಳನ್ನು ತಿರುಚಿ 345 ಜನರನ್ನು ಆಜೀವ ಸದಸ್ಯರನ್ನಾಗಿ ಹಾಲಿ ಅಧ್ಯಕ್ಷರು ಹಾಗೂ ಗೌರವ ಪ್ರಧಾನ ಕಾರ್ಯದರ್ಶಿಗಳು ಮಾಡಿಕೊಂಡಿದ್ದಾರೆ. ಅಧಿಕಾರದಲ್ಲಿ ಮುಂದುವರಿಯಬೇಕು ಎಂಬ ಉದ್ದೇಶದಿಂದ ಸದಸ್ಯತ್ವ ಮಾಡಿಕೊಳ್ಳಲಾಗಿದೆ ಎಂದು ಆಪಾದಿಸಿದರು.

345 ಸದಸ್ಯರನ್ನು ತೆಗೆದುಕೊಂಡಿರುವ ಬಗ್ಗೆ ದೂರು ನೀಡಲಾಗಿ ಬೆಂಗಳೂರು ನಗರ ಜಿಲ್ಲೆ ಸಂಘ ಸಂಸ್ಥೆಗಳ ನೋಂದಣಿ ಅಧಿಕಾರಿಗಳು 345 ಜನರ ಆಜೀವ ಸದಸ್ಯತ್ವ ವಿಷಯವನ್ನು ಸರ್ವ ಸದಸ್ಯರ ಸಭೆಯಲ್ಲಿ ಮತ್ತೊಮ್ಮೆ ಮಂಡಿಸಬೇಕು. ಅಲ್ಲಿಯವರೆಗೆ ಸದಸ್ಯತ್ವ ತಡೆಹಿಡಿಯಬೇಕು ಎಂದು ಸೂಚನೆ ನೀಡಿದ್ದಾರೆ. ಅಷ್ಟೇ ಅಲ್ಲ 345 ಸದಸ್ಯರನ್ನು ಹೊರಗಿಟ್ಟು ಚುನಾವಣೆ ನಡೆಸಬೇಕೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಆದರೂ ಅವರ ಆದೇಶ, ಸೂಚನೆ ಮೀರಿ ನಡೆದುಕೊಳ್ಳಲಾಗುತ್ತಿದೆ ಎಂದು ಅವರು ಆಪಾದಿಸಿದರು.

ಆದರೆ ಇವರ ಆರೋಪವನ್ನು ತಳ್ಳಿಹಾಕಿ ಹೇಳಿಕೆ ನೀಡಿರುವ ಡಬ್ಲ್ಯು.ಪಿ. ಕೃಷ್ಣ ಸದಸ್ಯತ್ವ ಮಾಡಿಕೊಳ್ಳುವುದು ಎಲ್ಲ ಸಂಸ್ಥೆಗಳಲ್ಲಿ ನಡೆಯುವಂತಹ ಸಹಜ ಪ್ರಕ್ರಿಯೆ. ಅಧಿಕಾರ ಉಳಿಸಿಕೊಳ್ಳಲು ಸದಸ್ಯತ್ವ ಮಾಡಿಕೊಳ್ಳಲಾಗಿದೆ ಎಂಬ ಆರೋಪ ಸುಳ್ಳು ಎಂದು ಹೇಳಿದ್ದಾರೆ.

345 ಆಜೀವ ಸದಸ್ಯರು ನಾಳೆ ನಡೆಯಲಿರುವ ಚುನಾವಣೆಯಲ್ಲಿ ಮತ ಚಲಾಯಿಸಬಹುದು. ಯಾವುದೇ ನ್ಯಾಯಾಲಯ ಅಥವಾ ಪ್ರಾಧಿಕಾರ ಈ ಬಗ್ಗೆ ತಡೆ ನೀಡಿಲ್ಲ ಎಂದು ತಿಳಿಸಿದ್ದಾರೆ.

## ಕನ್ನಡ ಕಣ್ಮಣಿ ಮಾಸ ಪತ್ರಿಕೆ



ಪ್ರಧಾನ ಸಂಪಾದಕರು:
ಗೋವಿಂದಹಳ್ಳಿ ದೇವೇಗೌಡ

ಕನ್ನಡ ಕಣ್ಮಣಿ ಪ್ರಕಾಶನ
ಎಫ್-೧೨೪, ಕೃಷ್ಣ ಬಿಲ್ಡಿಂಗ್
ಅವೆನ್ಯೂ ರಸ್ತೆ,
ಬೆಂಗಳೂರು - ೫೬೦ ೦೦೨.

ಕನ್ನಡ ಕಣ್ಮಣಿ ಪತ್ರಿಕೆಗೆ
ಇಂದೇ ಚಂದಾದಾರರಾಗಿರಿ

ತ್ರೈವಾರ್ಷಿಕ ಚಂದಾ
ರೂ. ೨೦೦.೦೦

ಆಜೀವ ಸದಸ್ಯತ್ವ
ರೂ. ೫೦೦.೦೦

1ನೇ ಪುಟದಿಂದ...

ವಿಮಾನ ನಿಲ್ದಾಣ ವೆಂದು ಹಾಗೂ ನಗರದ ಅವಿನ್ಯೂ ರಸ್ತೆಯನ್ನು ಅನಿಕೇತನ ರಸ್ತೆ ಎಂದು ನಾಮಕರಣ ಮಾಡಲು ಒತ್ತಾಯಿಸಿದರು. ಆಡು ಮುಟ್ಟದ ಸೊಪ್ಪಿಲ್ಲ, ಕುವೆಂಪು ಬರೆಯದ ಸಾಹಿತ್ಯವಿಲ್ಲ, ಅವರು ಕನ್ನಡಕ್ಕಾಗಿಯೇ ಬದುಕನ್ನು ಸವೆಸಿದರು. ಮನುಜ ಮತ ವಿಶ್ವಪಥ, ವಿಶ್ವಮಾನವ ತತ್ವ, ಸರ್ವೋದಯ ತತ್ವದ ಮೂಲಕ ಎಲ್ಲರ ಬದುಕು ಹಸನಾಗಲು ಕುವೆಂಪು ಆಶಿಸಿದ್ದಾರೆ ಎಂದು ನುಡಿದರು.

**ಕುವೆಂಪು ಕೃತಿಗಳು ಎಲ್ಲ ಭಾಷೆಗಳಿಗೆ ಅನುವಾದವಾಗಲಿ :-** ಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷರಾದ ಗೋವಿಂದಹಳ್ಳಿ ದೇವೇಗೌಡರು ಸಂಸ್ಥೆಯು ಬೆಳೆದು ಬಂದ ಹಾದಿಯನ್ನು ವಿವರಿಸುತ್ತಾ, ಕುವೆಂಪು ಜನ್ಮ ಶತಮಾನೋತ್ಸವದ ಅಂಗವಾಗಿ ಕುವೆಂಪುರವರ ಕಲಾಕೃತಿ ಅನಾವರಣ ಹಾಗೂ ಕುವೆಂಪು ಕುರಿತ ವಿಶ್ವಕವಿ ಕುವೆಂಪು ಎಂಬ ಕೃತಿಯನ್ನು ಬಿಡುಗಡೆ ಮಾಡುತ್ತಿರುವುದು ಹೆಮ್ಮೆಯ ಸಂಗತಿ ಎಂದ ಅವರು, ಕುವೆಂಪು ಅವರ ಎಲ್ಲ ಕೃತಿಗಳೂ ರಾಷ್ಟ್ರದ ಎಲ್ಲಾ ಭಾಷೆಗಳಿಗೆ ಅನುವಾದವಾಗಬೇಕೆಂದು ನುಡಿದರು.

**ಕುವೆಂಪುರವರಿಗೆ ಭಾರತ ರತ್ನ ನೀಡಲಿ :-** ಕನ್ನಡ ಚಳವಳಿ ನಾಯಕ ಹಾಗೂ ಮಾಜಿ ಶಾಸಕರಾದ ಕೆ. ಪ್ರಭಾಕರ ರೆಡ್ಡಿಯವರು ಮಾತನಾಡುತ್ತಾ ಕೇಂದ್ರ ಸರ್ಕಾರದ ಮಲತಾಯಿ ಧೋರಣೆಯಿಂದ ಕುವೆಂಪುರವರಿಗೆ ಭಾರತ ರತ್ನ ದೊರಕಿಲ್ಲವೆಂದು ವಿಷಾದ ವ್ಯಕ್ತಪಡಿಸಿ, ಸರೋಜಿನಿ ಮಹಿಷಿ ವರದಿ 18 ವರ್ಷವಾದರೂ ಅನುಷ್ಠಾನವಾಗಿಲ್ಲ ಎಂದ ಅವರು ಕನ್ನಡದ ಬಗ್ಗೆ ತೀವ್ರ ನಿರಾಸಕ್ತಿಯನ್ನು ತೋರಿಸುತ್ತಿರುವ ಸರ್ಕಾರದ ಬಗ್ಗೆ ಆಕ್ರೋಶ ವ್ಯಕ್ತಪಡಿಸಿದರು. ಮುಂದುವರಿಯುತ್ತಾ ಕನ್ನಡ ಚಳುವಳಿಗೆ ಯುವಶಕ್ತಿ ಮುನ್ನುಗ್ಗಲು ಕರೆ ನೀಡಿದರು.

**ಕನ್ನಡಿಗರು ಪೌರುಷ ಬೆಳೆಸಿಕೊಳ್ಳಿ:-** ಚಿತ್ರಸಾಹಿತಿ, ನಿರ್ದೇಶಕ, ಕನ್ನಡ ಕುವರ ಸಿ.ವಿ. ಶಿವಶಂಕರ್ ಮಾತನಾಡುತ್ತಾ ಇಂದಿನ ಕನ್ನಡದ ಸ್ಥಿತಿಗತಿಯ ಬಗ್ಗೆ ಆತಂಕ ವ್ಯಕ್ತಪಡಿಸಿ, ಒಂದು ಸಾಮ್ರಾಜ್ಯವಾಗಿ ಮೆರೆದ ಕರ್ನಾಟಕದ ದುಸ್ಥಿತಿಗೆ ಹಾಗೂ ಕನ್ನಡಿಗರ ನಿರಭಿಮಾನಕ್ಕೆ ರಾಜಕಾರಣಿಗಳೇ ಕಾರಣ ಎಂದು ದೂಷಿಸಿದ ಅವರು ಸಾವಿರಾರು ವರ್ಷಗಳ ವೀರ ಇತಿಹಾಸ ಕನ್ನಡಿಗರದ್ದು, ಕನ್ನಡಿಗರು ಪೌರುಷ ಬೆಳೆಸಿಕೊಳ್ಳಬೇಕೆಂದು ಕರೆ ನೀಡಿದರು.

ಖ್ಯಾತ ಚಲನಚಿತ್ರ ನಿರ್ದೇಶಕ ಟಿ.ಎಸ್. ನಾಗಾಭರಣ ಅವರು ಮಾತನಾಡುತ್ತಾ, ಪುಸ್ತಕ ಪ್ರಕಟಣೆ ಒಂದು ಉತ್ತಮ ಕೆಲಸ ಎಂದು ಸಂಸ್ಥೆಯ ಕಾರ್ಯವನ್ನು ಶ್ಲಾಘಿಸಿದರು.

ಶೇಷಾದ್ರಿಪುರಂ ಕಾಲೇಜು ಟ್ರಸ್ಟ್‌ನ ಕಾರ್ಯದರ್ಶಿ ಡಬ್ಲ್ಯೂ.ಸಿ. ಕೃಷ್ಣ ಅವರು ಮಾತನಾಡುತ್ತಾ ಡಾ॥ ದೊಡ್ಡರಂಗೇಗೌಡರ ಕವನಗಳಲ್ಲಿ ಸಾಮಾಜಿಕ ಕಳಕಳಿ ಇದೆ ಇವುಗಳು ಧ್ವನಿಸುರುಳಿಗಳಾದರೆ ಎಲ್ಲರಿಗೂ ಸತಲುಪುತ್ತವೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು.

ಸಂಸ್ಥೆಯ ಗೌರವ ಅಧ್ಯಕ್ಷರಾದ ಗ್ರೀನ್‌ಹೌಸ್‌ನ ವಾಸುರವರು ಮಾತನಾಡುತ್ತಾ ಕನ್ನಡಿಗರು ಅಭಿಮಾನ ಶೂನ್ಯರಲ್ಲ, ಅಂತಹ ಕೀಳರಿಮೆ ಬೆಳೆಸಿಕೊಳ್ಳುವುದು ಬೇಡ ಎಂದ ಅವರ, ಕುವೆಂಪು ಅವರ ನುಡಿಗಳನ್ನು ಜಾರಿಗೆ ತರುವ ಮೂಲಕ ಆಚರಿಸಿದಲ್ಲಿ ಕುವೆಂಪು ಜನ್ಮ ಶತಾಬ್ದಿ ಯಶಸ್ವಿಯಾಗುತ್ತದೆ ಎಂದರು.

ಸಂಸ್ಥೆಯ ಮಹಿಳಾ ಘಟಕದ ಅಧ್ಯಕ್ಷರಾದ ಡಾ॥ ವರದಾ ಶ್ರೀನಿವಾಸ್ ಅವರು ಮಾತನಾಡುತ್ತಾ ಕನ್ನಡ ಜನಮನದಲ್ಲಿ ರಾರಾಜಿಸುತ್ತಿರುವ ಡಾ॥ ರಾಜ್ ಹೆಸರೇ ಒಂದು ಸ್ಫೂರ್ತಿದಾಯಕ ಎಂದ ಅವರು ಮುಂಬರುವ ವರ್ಷದಲ್ಲಿ ಮಹಿಳಾ ಘಟಕದಿಂದ ಸಾಂಸ್ಕೃತಿಕ ಕಾರ್ಯಕ್ರಮ, ಮಹಿಳೆಯರ ಜಾಗೃತಿ ಬಗ್ಗೆ ವಿಚಾರ ಸಂಕಿರಣ, ಮುಂತಾದ ಉತ್ತಮ ಕಾರ್ಯಕ್ರಮಗಳನ್ನು ರೂಪಿಸಲಾಗುವುದೆಂದು ನುಡಿದರು.

ಸಮಾಜ ಸೇವಕ ರಾಮರೆಡ್ಡಿಯವರು ಮಾತನಾಡುತ್ತಾ, ರಾಜಕೀಯದವರಿಂದಲೇ ಕನ್ನಡಕ್ಕೆ ಕುತ್ತು ಬಂದಿದೆ ಎಂದ ಅವರು ನಾಮಫಲಕಗಳೆಲ್ಲ ಕನ್ನಡದಲ್ಲಿದ್ದರೆ ಪರಭಾಷಿಕರು ತಾವಾಗಿಯೇ ಕನ್ನಡ ಕಲಿಯುತ್ತಾರೆ ಎಂದು ನುಡಿದರು.

ವೃತ್ತ ಆರಕ್ಷಕರು ಹಾಗೂ ಸಾಹಿತಿ ಶ್ರೀ ಎಂ.ಎನ್. ಮಂಜೇಗೌಡರು ಬೆಂಗಳೂರಿನಲ್ಲಿ ನೆಲೆಸಿರುವ ಸರ್ವರೂ ಕನ್ನಡ ಕಲಿಯುವ ಮನಸ್ಸು ಮಾಡಬೇಕೆಂದು ತಿಳಿಸಿ, ಕುವೆಂಪು ಅವರ ಗೀತೆಯಿಂದ ಸಭಿಕರನ್ನು ರಂಜಿಸಿದರು.

ಕುವೆಂಪು ಅವರ ಕಲಾಕೃತಿಯನ್ನು ಅಂದವಾಗಿ ರಚಿಸಿದ ಶ್ರೀ ರಾಜೇಂದ್ರ ಕೃಷ್ಣ ಅವರನ್ನು ಸಮಾರಂಭದಲ್ಲಿ ಗೌರವಿಸಲಾಯಿತು.

ಸಂಸ್ಥೆಯ ವತಿಯಿಂದ ಹೊರತಂದ ವಿಶ್ವಕವಿ ಕುವೆಂಪು ಹಾಗೂ ಯುಗವಾಣಿ ಕೃತಿಗಳನ್ನು ಹಾಗೂ ಭುವನಸಿರಿ ಪ್ರಕಾಶನದ ಗೀತಸಿರಿ ಕೃತಿಯನ್ನು ಬಿಡುಗಡೆ ಮಾಡಲಾಯಿತು.

ಸಂಸ್ಥೆಯ ವತಿಯಿಂದ ಹಿರಿಯ ಸ್ವಾತಂತ್ರ್ಯ ಹೋರಾಟಗಾರರ ಹೆಚ್.ಎಸ್. ದೊರೆಸ್ವಾಮಿ, ಕನ್ನಡ ಅಭಿವೃದ್ಧಿ ಪ್ರಾದಿಕಾರದ ಅಧ್ಯಕ್ಷ ಶ್ರೀ ಬಿ.ಎಂ. ಇದಿನಬ್ಬ, ಸಮಾಜ ಸೇವಕ ರಾಮರೆಡ್ಡಿ ಗಾಯಕ ಡಾ॥ ಬಾನಂದೂರು ಕೆಂಪಯ್ಯ, ಶೇಷಾದ್ರಿ ಪುರಂ ಕಾಲೇಜು ಟ್ರಸ್ಟ್‌ನ ಕಾರ್ಯದರ್ಶಿ ಡಬ್ಲ್ಯೂ.ಸಿ. ಕೃಷ್ಣರವರನ್ನು ಆತ್ಮೀಯವಾಗಿ ಸನ್ಮಾನಿಸಲಾಯಿತು.

ಶ್ರೀ ನಾರಾಯಣರಾವ್ ಮಾನೆ ಅವರು ಪ್ರಾರ್ಥನೆ ಮಾಡಿದರು. ಶ್ರೀ ರೇವಣ್ಣ ಅವರು ಸ್ವಾಗತಿಸಿದರು. ಡಾ॥ ಟಿ. ಗೋವಿಂದಯ್ಯ ಅವರು ಕಾರ್ಯಕ್ರಮ ನಿರೂಪಣೆ ಮಾಡಿದರು. ಡಾ॥ ಬಾನಂದೂರು ಕೆಂಪಯ್ಯ ತಂಡದವರಿಂದ ಸುಗಮ ಸಂಗೀತ ಕಾರ್ಯಕ್ರಮ ನಡೆಸಲಾಯಿತು.

## ಪ್ರಕೃತಿಯ ವಿಕೋಪ

ಹೇಳುವೆಯಾ ಮನುಜ ಹೇಳುವೆಯಾ
ಉತ್ತರವಿದಕ್ಕೆ ನೀ ಹೇಳುವೆಯಾ
ಪ್ರಕೃತಿಮಾತೆಯು ಸಿಡಿದೆದ್ದಾಗ
ಆಗುವ ಕ್ರಾಂತಿಯ ತಡೆಯುವರಾರು ? ಹೇಳುವೆಯಾ ?

ಕಾರ್ಮೋಡ ಗುಡುಗು ಸಿಡಿಲು ಬಡಿದು
ಬಿರುಗಾಳಿ, ಮಳೆ ಭೋರ್ಗರೆದಾಗ
ಆಹುತಿಯಾಗುವ ಬಡ ಜೀವಿಗಳ
ಉಳಿಸುವರಾರು ? ಹೇಳುವೆಯಾ ? ॥

ಜಲ, ಜಲ, ಹರಿಯುವ ನದಿಗಳಲಿ
ಮಿಲ ಮಿಲ ಮುಳುಗುವ ಪ್ರಾಣಿಗಳ
ಕಾಡ್ಗಿಚ್ಚಿನ ಉರಿಗೆ ಹಾರಾಡಿ ಬೀಳುವ
ಮೃಗ ಪಕ್ಷಿಗಳ ಉಳಿಸುವರಾರು ? ॥

ಕ್ರೂರ ಮೃಗಗಳ ಬಾಯಿಗೆ ಬೀಳುವ
ಸಾಧು ಪ್ರಾಣಿಗಳ ಉಳಿಸುವವರಾರು
ಬರಗಾಲದ ಒಣರೋಗಿಗಳಿಗೆ
ಬಲಿಯಾಗುವ ಬಡಪ್ರಾಣಿಗಳ ॥

ವಿಜ್ಞಾನ ಲೋಕದ ಬುದ್ಧಿಜೀವಿಯಾಗಿ
ವಿಮಾನ ತಯಾರಿಸಿ ಬಾನಲ್ಲಿ ಹಾರಿಸಿ
ಚಂದ್ರಲೋಕದಲಿ ಯಂತ್ರ ಕೆಟ್ಟು ನಿಂತಾಗ
ಮಾನವನ ಪ್ರಾಣ ಉಳಿಸುವವರಾರು ॥

ಭಾವನ ಲೋಕದ ಸಾಹಿತಿಯೊಬ್ಬ
ನಂಬಿಕೆ ಇಲ್ಲದ ನಾಸ್ತಿಕನೊಬ್ಬ
ಆಸ್ತಿಕ ನಾಸ್ತಿಕರ ವಿವಾದದಿಂದ
ಸೃಷ್ಟಿ ಲಯ ಗುಟ್ಟನ್ನರಿತವರಾರು ॥

ಜಾವದಿ ಅರಳುವ ಕುಸುಮಗಳ
ದಿನ ದಿನ ಜನಿಸುವ ಹಸುಳೆಗಳ
ಲೋಕದ ಸೃಷ್ಟಿಗೆ ಕಾರಣಳಾದ
ಪ್ರಕೃತಿ ಮಾತೆಯ ಅರಿತವರಾರು ? ॥

ಹೇಳುವೆಯಾ ಮನುಜ ಹೇಳುವೆಯಾ
ಉತ್ತರವಿದಕೆ ನೀ ಹೇಳುವೆಯಾ

- ಗೋವಿಂದಹಳ್ಳಿ ದೇವೇಗೌಡ

MAG(5)PRBDECL 105/85 CPMG/KA-BGS/350/2003-2005
ರವಾನೆ ದಿನಾಂಕ ಪ್ರತಿ ಮಾಹೆ ೨೨, ಅವಿನ್ಯೂ ರಸ್ತೆ ಅಂಚೆ ಕಛೇರಿ






ಸಂಪಾದಕರು, ಪ್ರಕಾಶಕರು : ಗೋವಿಂದಹಳ್ಳಿ ದೇವೇಗೌಡ | ಜನವರಿ ೨೦೦೫ | ಬೆಲೆ : ೩.೦೦

KANNADA KANMANI MONTHLY ಸಂಪುಟ-೧೯ ಸಂಚಿಕೆ-೧೧, ದೂರವಾಣಿ: ೨೯೧೯೪೬೭೨, ಮೊಬೈಲ್: ೯೩೪೨೮೧೩೨೫೯, ಫ್ಯಾಕ್ಸ್: ೫೧೨೪೬೧೨೬

ಕ್ಯಾಲೆಂಡರ್ ಹೊಸ ವರ್ಷದ ಶುಭಾಶಯಗಳು - 2005

# ಜನ ಸಂಘಟನೆ ಹೋರಾಟವಾದರೆ ಕನ್ನಡದ ಕೆಲಸವಾದೀತು

**-ಹೆಚ್.ಎಸ್. ದೊರೆಸ್ವಾಮಿ**




ಅಖಿಲ ಕರ್ನಾಟಕ ಕನ್ನಡ ಕಣ್ಮಣಿ ಡಾ|| ರಾಜ್ ಸಾಂಸ್ಕೃತಿಕ ಸಂಸ್ಥೆಯ ವತಿಯಿಂದ ಕನ್ನಡ ರಾಜ್ಯೋತ್ಸವ ಹಾಗೂ ವಿಶ್ವಕವಿ ಕುವೆಂಪು ಜನ್ಮ ಶತಮಾನೋತ್ಸವ ಸಮಾರಂಭದಲ್ಲಿ ಹಿರಿಯ ಸ್ವಾತಂತ್ರ್ಯ ಹೋರಾಟಗಾರರು ಶ್ರೀ ಹೆಚ್. ದೊರೆಸ್ವಾಮಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಬಿ.ಎಂ. ಇದಿನಬ್ಬ, ಶ್ರೀ ರಾಮರೆಡ್ಡಿ, ಶ್ರೀ ಡಬ್ಲ್ಯು. ಸಿ. ಕೃಷ್ಣ, ಡಾ|| ಬಾನಂದೂರು ಕೆಂಪಯ್ಯರವರುಗಳನ್ನು ಸನ್ಮಾನಿಸಲಾಯಿತು. ಚಿತ್ರದಲ್ಲಿ ಶ್ರೀ ಧರಣೇಶ್ ಬಿ.ಎ. ಶ್ರೀ ರೇವಣ್ಣ ಶ್ರೀ ನಾರಾಯಣರಾವ್ ಮಾನೆ, ಶ್ರೀ ಮಂಜೇಗೌಡರು, ಶ್ರೀ ವಾಸು, ಶ್ರೀ ಗೋವಿಂದಹಳ್ಳಿ ದೇವೇಗೌಡರು, ಡಾ.ದೊಡ್ಡರಂಗೇಗೌಡರು, ಶ್ರೀ ರಾಜೇಂದ್ರಕೃಷ್ಣ ಚಿತ್ರದಲ್ಲಿದ್ದಾರೆ.

ಜನ ಸಂಘಟನೆ ಆಗಬೇಕು, ಜನ ಹೋರಾಟ ಮಾಡಬೇಕು, ಚಳುವಳಿ ಮಾಡಬೇಕು ಆಗ ಕನ್ನಡದ ಕೆಲಸ ಆದೀತು ಎಂದು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಹೆಚ್.ಎಸ್.ದೊರೆಸ್ವಾಮಿ ಅವರು ಕರೆ ನೀಡಿದರು.

ಅಖಿಲ ಕರ್ನಾಟಕ ಕನ್ನಡ ಕಣ್ಮಣಿ ಡಾ|| ರಾಜ್ ಸಾಂಸ್ಕೃತಿಕ ಸಂಸ್ಥೆಯು ಹಮ್ಮಿಕೊಂಡಿದ್ದ ಕನ್ನಡ ರಾಜ್ಯೋತ್ಸವ ಹಾಗೂ ವಿಶ್ವಕವಿ ಕುವೆಂಪು ಜನ್ಮ ಶತಮಾನೋತ್ಸವ ಸಮಾರಂಭದಲ್ಲಿ ಕುವೆಂಪುರವರ ಕಲಾಕೃತಿಯನ್ನು ಅನಾವರಣ ಮಾಡಿ, ಸನ್ಮಾನ ಸ್ವೀಕರಿಸಿ ಅವರು ಮಾತನಾಡುತ್ತಿದ್ದರು. ಕರ್ನಾಟಕದಲ್ಲಿ ಹೊರರಾಜ್ಯಗಳಿಂದ ಬರುತ್ತಿರುವ ವಲಸಿಗರಿಂದ ಇಂದು ಕನ್ನಡಿಗರು ನಿರ್ಗತಿಕರಾಗುತ್ತಿದ್ದಾರೆ ಎಂದು ಆತಂಕ ವ್ಯಕ್ತಪಡಿಸಿದ ಅವರು ಸರ್ಕಾರಕ್ಕೆ ನಿರ್ದಿಷ್ಟ ದೃಷ್ಟಿ - ಧೋರಣೆ ಇಲ್ಲವೆಂದು ಖೇದ ವ್ಯಕ್ತಪಡಿಸಿದರು. ಸ್ವಾತಂತ್ರ್ಯ ಸಂಗ್ರಾಮಕ್ಕೆ ಕುವೆಂಪುರವರ ಕೊಡುಗೆ ಅಪಾರ ಅವರ ಕ್ರಾಂತಿಗೀತೆಗಳು, ಪದ್ಯಗಳು ಜನಸಮುದಾಯದಲ್ಲಿ ಸ್ಫೂರ್ತಿ ಹಾಗೂ ಕೆಚ್ಚು ಮೂಡಿಸುತ್ತಿದ್ದವು. ಪ್ರಸ್ತುತ ಕುವೆಂಪುರವರ ಕ್ರಾಂತಿ ಗೀತೆಗಳನ್ನು ಹಾಡುವ ಮೂಲಕ ಗಾಯಕರು ಜನ ಜಾಗೃತಿ ಮಾಡಬೇಕಾದ ತುರ್ತು ಅನಿವಾರ್ಯವಿದೆ ಎಂದು ನುಡಿದರು.

**ಕುವೆಂಪುಗೆ ನೊಬೆಲ್ ಪ್ರಶಸ್ತಿಗೆ ಆಗ್ರಹ :-** ಸಮಾರಂಭದ ಉದ್ಘಾಟನೆಯನ್ನು ನೆರವೇರಿಸಿ ಹಾಗೂ ಡಾ|| ದೊಡ್ಡರಂಗೇಗೌಡರ ಗೀತಸಿರಿ ಕೃತಿಯನ್ನು ಬಿಡುಗಡೆ ಮಾಡಿದ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಶ್ರೀ ಬಿ.ಎಂ. ಇದಿನಬ್ಬ ಅವರು ಮಾತನಾಡುತ್ತಾ ಡಾ|| ದೊಡ್ಡರಂಗೇಗೌಡರು ಜನಪರ ಸಾಹಿತಿಗಳು, ಅವರ ಕೃತಿಗಳು ಗ್ರಾಮೀಣ ಸೊಗಡಿನಿಂದ ಕೂಡಿವೆ ಎಂದ ಅವರು ಕುವೆಂಪು ಜನ್ಮಶತಮಾನೋತ್ಸವ ಸಂದರ್ಭದಲ್ಲಿ ವಿಶ್ವಕವಿ ಕುವೆಂಪುರವರ ನೊಬೆಲ್ ಪ್ರಶಸ್ತಿ ನೀಡಲು ಆಗ್ರಹಿಸಿದರು.

**ಶಾಸ್ತ್ರೀಯ ಭಾಷೆ ಘೋಷಣೆಗೆ ಒತ್ತಾಯ :-** ಖ್ಯಾತ ಜನಪರ ಕವಿ ದೊಡ್ಡರಂಗೇಗೌಡರು ಮಾತನಾಡುತ್ತಾ, 1500 ...ಗಳ ಲಿಖಿತ ಸಾಹಿತ್ಯ ಹೊಂದಿರುವ ಕನ್ನಡ ಭಾಷೆಯನ್ನು ...ಯ ಭಾಷೆ ಎಂದು ಘೋಷಿಸಲು ಕೇಂದ್ರ ಸರ್ಕಾರಕ್ಕೆ ...ಸಿದರು. ಕನ್ನಡಿಗರು ಕೇಂದ್ರ ಸರ್ಕಾರದ ಜಾಣ ಕಿವುಡು ... ಜಾಣ ಕುರುಡು ನೀತಿಯನ್ನು ಪ್ರತಿಭಟಿಸಿ ಪತ್ರ ಚಳುವಳಿ ...ಉ ಅವರು ಕರೆ ನೀಡಿದರು. ಮುಂದುವರಿಯುತ್ತಾ ದೇವನಹಳ್ಳಿ ...ತರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಕೆಂಪೇಗೌಡ ಅಂತರರಾಷ್ಟ್ರೀಯ

*ಪುಟ 2ಕ್ಕೆ ...*



ಅಖಿಲ ಕರ್ನಾಟಕ ಕನ್ನಡ ಕಣ್ಮಣಿ ಡಾ|| ರಾಜ್ ಸಾಂಸ್ಕೃತಿಕ ಸಂಸ್ಥೆಯ ವತಿಯಿಂದ ಕನ್ನಡ ರಾಜ್ಯೋತ್ಸವ ಹಾಗೂ ವಿಶ್ವಕವಿ ಕುವೆಂಪು ಜನ್ಮ ಶತಮಾನೋತ್ಸವ ಸಮಾರಂಭದ ಅಂಗವಾಗಿ ಕುವೆಂಪುರವರ ಕಲಾಕೃತಿಯನ್ನು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಶ್ರೀ ಹೆಚ್.ಎಸ್. ದೊರೆಸ್ವಾಮಿ ಅನಾವರಣ ಗೊಳಿಸಿದರು. ಚಿತ್ರದಲ್ಲಿ ಶ್ರೀ ರಾಜಣ್ಣ, ಶ್ರೀ ಬಿ.ಎಂ. ಇದಿನಬ್ಬ, ಡಾ|| ವರದಾ ಶ್ರೀನಿವಾಸ್, ಶ್ರೀ ವಾಸು, ಶ್ರೀ ವೆ. ಶ್ರೀನಿವಾಸ್, ಶ್ರೀ ಗೋವಿಂದಹಳ್ಳಿ ದೇವೇಗೌಡ ಚಿತ್ರದಲ್ಲಿದ್ದಾರೆ.